




'ಶ್ರೀ' ೧೦೦
ನೆನಪಿನ ಸಂಚಿಕೆ





# ಕನ್ನಡ ನುಡಿ

# ‘ ಬೆಳ್ಳಿ ಬಿಟ್ಟ ಬಳ್ಳಿ ’ ಮಾಲೆಯ ಪುಸ್ತಕಗಳು

ಬರಕೋ ಪದಾ ಬರಕೋ ○ ಗೊಮ್ಮಟೇಶ್ವರ ಚರಿತೆ ○ ನಿಂಬ ಸಾಮಂತ ಚರಿತೆ ○ ಕುಮುದೇಂದು ರಾಮಾಯಣ ○ ಕಂನುಡಿಯ ಹುಟ್ಟು ○ ಸಾಹಿತ್ಯ ವಿಹಾರ ○ ತೊರವೆ ರಾಮಾಯಣ ಕಥಾವಸ್ತು ವಿವೇಚನೆ ○ ಕನ್ನಡ ಪ್ರತಿಭಟನೆ ಕಾವ್ಯ ○ ಅಮೆರಿಕದಲ್ಲಿ ಗೊರೂರು ○ ಮಹಾಭಾರತದ ಭೀಮ ○ ರಂಗಗೀತೆಗಳು ○ ಪಾರಿಜಾತ ○ ಜಾನಪದ ಅಧ್ಯಯನ ವಿಚಾರ ಸಂಕಿರಣ ○ ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ ○ ಚಂದುಳ್ಳ ಮಕ್ಕಳ ಒಂಬತ್ತು ಕೊಡು ಸ್ವಾಮಿ ○ ದಾಸಪ್ಪ ಜೋಗಪ್ಪ ○ ಕತ್ತಾಲ ದಾರಿ ದೂರ ○ ಜಾನಪದ ಜಾಣ್ಮೆ ○ ಸುವ್ವಿ ಸುವ್ವಮ್ಮಲಾಲಿ ಸುವ್ವಲಾಲೆ ○ ತುಮಕೂರು ಜಿಲ್ಲೆಯ ಜಾನಪದ ನಂಬಿಕೆಗಳು ○ ಮುತ್ತು ಮುತ್ತಿನ ತ್ವಾಟ ○ ಬಣ್ಣವಾಡು ○ ಮೂವತ್ತು ಜನಪದ ಕಥೆಗಳು ○ ಜಾನಪದ ಅಧ್ಯಯನ ಸಂಕ್ಷಿಪ್ತ ಇತಿಹಾಸ ○ ಉತ್ತರ ಕನ್ನಡದ ಹವ್ಯಕರ ಜನಪದ ಕತೆಗಳು ○ ಐವರು ಹೇಳಿದ ಜಾನಪದ ಕಥೆಗಳು ○ ಧರ್ಮದೇವತೆ ○ ಜನಪದ ಬಸವ ಪುರಾಣ ○ ಸಾತು ಕ್ಯಾಮಣ್ಣನ ಲಾವಣಿಗಳು ○ ಬೆಳವಲ ಬೆಳಕು ○ ವಡ್ಡಗೆರೆ ನಾಗಮ್ಮ ○ ಎರಡು ಕಿನ್ನರಿಜೋಗಿ ಕಾವ್ಯಗಳು ○ ಉತ್ತರ ಕರ್ನಾಟಕದ ಬೈಗುಳಗಳು ○ ಗ್ರಾಮೀಣ ಗಾದೆಗಳು ○ ಜನಪದ ಶಿಶುಪ್ರಾಸಗಳು ○ ಗುಲಗಂಜಿ ಮಾದೇವಿ ○ ಹಸರ ಗಿಡದ ಮ್ಯಾಲ ಮೊಸರ ಚೆಲ್ಲೇದ ○ ಸಂಸಾರಿ ಹೆಚ್ಚೋ ಸಂನ್ಯಾಸಿ ಹೆಚ್ಚೋ ○ ಜನಪದ ಒಡಪುಗಳು ○ ಹಳ್ಳಿ ಹಬ್ಬಿಸಿದ ಹೂ ಬಳ್ಳಿ ○ ಜನಪದದಲ್ಲಿ ಮಳೆರಾಯನ ಮುನಿಸು ○ ಲಂಬಾಣಿಗರ ಜನಪದ ಗೀತೆಗಳು ○ ಕಥೆ ಕೇಳೇ ಗುಬಲಾಡಿ ○ ಎಣ್ಣೆಗೆರೆಯ ಜನಪದ ಗೀತೆಗಳು ○ ಲಂಬಾಣಿ ಗಾದೆಗಳು ○ ನಲ್ಲೂರು ದೊರೆಕಾಳಿ ○ ಕನ್ನಡ ನಾಟಕ ಸಂಪುಟ ○ ಕೋಲಾಟದ ಪದಗಳು ○ ಮರಾಠಿ ಲೋಕಸಾಹಿತ್ಯ ○ ಜನಪದ ಜೀವನ ತರಂಗಗಳು ○ ಬಂದೀರೆ ನನ್ನ ಜಡೆವೊಳಗೆ ○ ಕರ್ನಾಟಕದ ವೀರಗಲ್ಲುಗಳು ○ ಜನಪದ ಕಲಾವಿದರ ಸೂಚಿ ○ ಕನ್ನಡ ಗಾದೆಗಳ ಮಹಾಕೋಶ ಸಂಪುಟ-೧, ೨ ○ ಕಾದಂಬರಿಕಾರನ ಕಥೆ ○ ನಾನು ಯಾರು ? ○ ಜನಪದ ಝೇಂಕಾರ ○ ನಮ್ಮ ಕಣ್ಣು ○ ರಿವಾಯತ ಪದಗಳು ○ ಕನ್ನಡ ಜನಪದ ಕಥೆಗಳು ○ ಹಠಮಾರಿ ಹೆಣ್ಣು ಮತ್ತು ಇತರ ಜನಪದ ಕಥೆಗಳು ○ ಕೋಲಾಟಗಳು ಮತ್ತು ಕೋಲುಪದಗಳು ○ ನಾನೊಂದು ಕನಸು ಕಂಡೆ (ಕಮಲಾದೇವಿ ಚಟ್ಟೋಪಾಧ್ಯಾಯರ ಜೀವನ ಚರಿತ್ರೆ) ○ ಮಹಿಳೆಯರ ಕೆಲವು ಮರಾಠಿ ಕಥೆಗಳು ○ ಶಿವಗಂಗೆ ಸುತ್ತಿನ ಜನಪದ ಕಥೆಗಳು ○ ಭಾರತದ ಪ್ರಾಚೀನ ವಿದ್ಯಾಪೀಠಗಳು ○ ಕನ್ನಡ ವೃತ್ತಿಗಾಯಕ ಕಾವ್ಯಗಳು ○ ಬಸವರಾಜ ○ ಉತ್ತಂಗಿ ಚನ್ನಪ್ಪ ○ ಮಡಿಕೇರಿ ಸಾಹಿತ್ಯ ಸಮ್ಮೇಳನ ○ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನ ○ ರಿವಾಯತಗಳು ○ ನಮ್ಮ ಲೇಖಕಿಯರು ○ ಚಿನ್ನದ ಕದರ್ಲ್ಯಾಂಗೆ ಸಲಹಿನಿ ○ ರುದ್ರಭಟ್ಟ ಕವಿ ○ ಕವಿ ಲಕ್ಷ್ಮೀಶ ○ ಕೊಡವ ಕನ್ನಡ ನಿಘಂಟು ○ ನಮ್ಮ ಕರ್ನಾಟಕ ○ ಕೂಸಾಯ್ತು ನಮ್ಮ ಕೊಮ್ಮುರ್ಲ್ಯಾಗೆ ○ ವಚನ ವಾಙ್ಮಯ ದರ್ಶನ ○ ವೀರಶೈವ ಪುರಾಣಗಳು ○ ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ಸತ್ವ ○ ಓಂಕಾರ ನಾದಸುಧಾ ○ ನಾಗಚಂದ್ರ ಒಂದು ಅಧ್ಯಯನ ○ ಭಕ್ತ ಮಾರ್ಕಂಡೇಯ ○ ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ ○ ಕೊಡಗು ಇತಿಹಾಸ ಪುಟಗಳಿಂದ ○ ಚಾವುಂಡರಾಯ ಪುರಾಣಂ ○ ಚಾಮರಸ ವಿಚಾರ ಸಂಕಿರಣ.

---

ಕನ್ನಡ ಸಾಹಿತ್ಯ ಪರಿಷತ್ತು / ಪಂಪಮಹಾಕವಿ ರಸ್ತೆ / ಚಾಮರಾಜಪೇಟೆ / ಬೆಂಗಳೂರು–೫೬೦ ೦೧೮

# ಕನ್ನಡ ನುಡಿ

ಸಂಪಾದಕರು
ಸಿ. ಸಿದ್ಧಲಿಂಗಪ್ಪ

ಸಂಪುಟ ೪೭ ಜನವರಿ ೧, ೧೯೮೪ ಸಂಚಿಕೆ ೧




# 'ಶ್ರೀ' ೧೦೦ರ ನೆನಪಿಗಾಗಿ...

ಹೊಸಗನ್ನಡದ ಆಚಾರ್ಯ ಪುರುಷರಾದ ಬೆಳ್ಳೂರು ಮೈಲಾರಯ್ಯ ಶ್ರೀಕಂಠಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಇದರ ಏಳಿಗೆಗಾಗಿ ಬಹುವಾಗಿ ದುಡಿದವರು. ಕನ್ನಡಿಗರಿಂದಲೇ ಕನ್ನಡವು ಅಲಕ್ಷ್ಯಕ್ಕೆ ಒಳಗಾಗಿದ್ದ ಸಂದರ್ಭದಲ್ಲಿ ಕನ್ನಡದ ಏಳಿಗೆಗಾಗಿ ಶ್ರಮಿಸಿದವರು. 'ಕನ್ನಡ ತಲೆ ಎತ್ತುವ ಬಗೆ'ಯನ್ನು ಕುರಿತು ಬಹು ಹಿಂದೆಯೇ ಕರ್ನಾಟಕದ ಜನತೆಗೆ ಮಾರ್ಗದರ್ಶಕರಾಗಿದ್ದುದಲ್ಲದೆ, ಬೇರೆ ಬೇರೆ ಕ್ಷೇತ್ರಗಳಲ್ಲಿಯ ಪ್ರತಿಭಾವಂತರನ್ನು ಕನ್ನಡದ ಅಭಿವೃದ್ಧಿಯ ಕಡೆಗೆ ಆಕರ್ಷಿಸಿ ಕನ್ನಡದ ತೇರನ್ನು ಎಳೆದ-ಎಳೆಸಿದ ಗಣ್ಯರು.

ಇಂಥ ಎತ್ತರದ ವ್ಯಕ್ತಿತ್ವವುಳ್ಳ 'ಶ್ರೀ'ಯವರು ಹುಟ್ಟಿ ೧೯೮೪ ಜನವರಿ ೩ಕ್ಕೆ ನೂರು ವರ್ಷಗಳು ಸಲ್ಲುತ್ತವೆ. 'ಕನ್ನಡದ ಕಣ್ವ'ರೆಂದು ಹೆಸರಾಗಿರುವ ಇವರ ಜನ್ಮಶತಾಬ್ಧಿಯ ಗೌರವ ಸ್ಮರಣೆಗಾಗಿ ಕನ್ನಡ ಸಾಹಿತ್ಯ ಪರಿಷತ್ತು ಈ ಸಂದರ್ಭದಲ್ಲಿ ನಾಡಿನ ಹಿರಿಯ ಸಾಹಿತಿಗಳಿಂದ 'ಶ್ರೀ'ಯವರ ಬದುಕು ಬರಹಗಳನ್ನು ಕುರಿತ ಲೇಖನಗಳನ್ನು ಆಹ್ವಾನಿಸಿ 'ಕನ್ನಡ ನುಡಿ' ವಿಶೇಷ ಸಂಚಿಕೆಯ ರೂಪದಲ್ಲಿ ಈ ದಿನ ಬಿಡುಗಡೆ ಮಾಡುತ್ತಿದೆ. 'ಶ್ರೀ'ಯವರ ಗೌರವ ಸ್ಮರಣೆಗಾಗಿ ಹೊರಬಂದಿರುವ ಈ ಸಂಚಿಕೆಯನ್ನು ಕನ್ನಡಿಗರು ಪ್ರೀತಿ ಆದರ ಗೌರವಗಳಿಂದ ಬರಮಾಡಿಕೊಳ್ಳುತ್ತಾರೆಂಬ ಭರವಸೆ ನನಗಿದೆ.

ಅಧ್ಯಕ್ಷರು

## ವಿಶೇಷ ಸೂಚನೆ

‘ಶ್ರೀ’ಯವರ ನೂರರ ನೆನಪು ‘ಕನ್ನಡ ನುಡಿ’ ವಿಶೇಷ ಸಂಚಿಕೆಯನ್ನು ತರಿಸಿಕೊಳ್ಳಲು ಇಚ್ಛಿಸುವವರು ಒಂದು ರೂಪಾಯಿ ಅಂಚೆ ಚೀಟಿಯನ್ನು “ಗೌರವ ಕಾರ್ಯದರ್ಶಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮”— ಇವರಿಗೆ ಕಳುಹಿಸಿ ಪಡೆಯಬಹುದು.

## ಶುಭಾಶಯಗಳು

ತಮಗೆಲ್ಲ ೧೯೮೪ರ ಹೊಸವರ್ಷದ ಹಾರ್ದಿಕ ಶುಭಾಶಯಗಳನ್ನು ತಿಳಿಸಲು ಹರ್ಷವೆನಿಸುತ್ತದೆ.

ಹಂಪ. ನಾಗರಾಜಯ್ಯ
ಅಧ್ಯಕ್ಷರು

# ಕನ್ನಡದ ವೀರಶ್ರೀ




೧

'ಕನ್ನಡದ ವೀರಶ್ರೀ ಕಣ್ಣಮರೆಯಾಯಿತಿಂದು
ನಾಡುನುಡಿ ಹೆಗ್ಗಳಿಕೆಯನು ತನ್ನ ನರನರದ
ನಾಳದಲಿ ನೆರೆ ತುಂಬಿ ತಪದ ಗವಿಯಿಂದೆದ್ದು
ತನ್ನ ದುಃಖವ ತುಳಿದು, ಹೆರರ ತುಳಿತಕೆ ಸಿಕ್ಕು
ಹುಡಿಯಾದ ನಾಡಿಗರ ಕೆಚ್ಚನೆಚ್ಚರಿಸಲಿಕೆ
ಕನ್ನಡದ ಬಾವುಟವ ಹಿಡಿದೆತ್ತಿ ಹಾಡುತ್ತ
ತಾಯನೋಟವ ಕಂಡು ಏಳೆಂದು ಬಾಳೆಂದು
ಹುರಿಗೊಂಡು ಕರೆಯುತ್ತ ಹಗೆಯೊಡನೆ ಹೋರುತ್ತ
ಮಿರಿಮಿಂಚಿ ಹಿರಿಮೊಳಗಿ ಮಳೆಗರೆದು ತಂಪೆರೆದ
ಕನ್ನಡದ ವೀರಶ್ರೀ ಕಣ್ಣಮರೆಯಾಯಿತಿಂದು!'

೨

'ಕನ್ನಡದ ವೀರಶ್ರೀ ಕಣ್ಣಮರೆಯಾಯಿತಿಂದು?
ತಿಳಿಯದೇ ಇದು ನಿನಗೆ ಹೊರಗಣ್ಣ ಸತ್ಯವೆಂದು?
ನಾಡಿನೆದೆಯಲಿ ಹೊಕ್ಕು ಹಮ್ಮು ಸೊಮ್ಮನು ನೀಡಿ
ಒಂದೆ ತಾಯಿಯ ನಿಚ್ಚ ನೋಟವನು ಕೊರೆಕೊರೆದು
ಇದಕಾಗಿ ದುಡಿಯುವೆನು ಇದಕಾಗಿ ಮಡಿಯುವೆನು
ಎಂಬ ಕನಸನು ನಿಲಿಸಿ ಸಂಕಲ್ಪವನು ಬಲಿಸಿ
ಪ್ರಭೆಯೊಂದೆ ಶತಕೋಟಿ ಚಿಕ್ಕೆಯಲಿ ಚೆದರಿದೊಲು
ನೂರಾರು ಕಿಡಿಯಾಗಿ ನಾಡಿನಲಿ ಅವತರಿಸಿ
ತಾಹಿಂದೆ ಸರಿದಿಹುದು ತನ್ನ ಕೃತಿ ನೋಡಲೆಂದು
ಕನ್ನಡದ ವೀರಶ್ರೀ ಕಣ್ಣ ಮರೆಯಲ್ಲವಿಂದು!'

❋ ರಸಿಕರಂಗ



ಜನನ : ೩-೧-೧೮೮೪ ಮರಣ : ೫-೧-೧೯೪೬

# ಬಿ. ಎಂ. ಶ್ರೀ. ಅವರ ಸಂದೇಶ




(೧೯೩೮ರಲ್ಲಿ ಕಲಬುರ್ಗಿಯಲ್ಲಿ ನಡೆದ ೧೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಿಂದ ಆಯ್ದ ಭಾಗ)

"ಮಹಾಶಯರೇ, ಒಂದು ದೇಶದ ಶ್ರೇಯೋಭಿವೃದ್ಧಿಗೆ ಆವಶ್ಯಕವಾದ ಅನೇಕ ಮುಖವಾದ ಸಾಧನಗಳಲ್ಲಿ ಸಾಹಿತ್ಯ ಕೃಷಿ ಒಂದಾಗಿರುತ್ತದೆ. ಈ ಸಾಹಿತ್ಯ ಪರಿಷತ್ತಿನಲ್ಲಿ ಮುಖ್ಯವಾಗಿ ನಾವು ವಿಚಾರ ಮಾಡತಕ್ಕುದೂ ಸಾಹಿತ್ಯ ವಿಷಯವೇ ಆಗಿರುತ್ತದೆ. ಒಳ್ಳೆಯ ಸಾಹಿತ್ಯವನ್ನು ಪಡೆದ ಜನಾಂಗದ ಹೃದಯದಲ್ಲಿ ಜ್ಞಾನವೂ,

ಕನ್ನಡ ಸಾಹಿತ್ಯ ಸಮ್ಮೇಳನಗಳ
ಅಧ್ಯಕ್ಷರುಗಳು
೧೯೧೫—೧೯೩೬

ನಿಷ್ಕಲ್ಮಷವಾದ ಆನಂದವೂ ಸತ್ಪ್ರೇರಣೆಯೂ ಸಮಾಜದ ಪುನರ್ನಿರ್ಮಾಣದ ಕಾರ್ಯದಲ್ಲಿ ಐಕ್ಯಮತ್ಯವೂ ಬಲವಾಗಿ ಬೇರೂರುತ್ತವೆ. ಅಂತಹ ಸಾಹಿತ್ಯ, ಅಂತಹ ಪುಸ್ತಕ ಭಂಡಾರ ನಮ್ಮಲ್ಲಿ ಎಷ್ಟಿದೆ? ಕನ್ನಡ ನಾಡಿನಲ್ಲಿ ಅನೇಕ ಜನರು—ಜನಸಾಮಾನ್ಯವು—ಗಂಡಸರು, ಹೆಂಗಸರು, ಮಕ್ಕಳು—ಈಗ ಓದು ಬರೆಹವನ್ನು ಕಲಿಯುತ್ತಿದ್ದಾರೆ; ಮುಂದೆ ಇನ್ನೂ ಹೆಚ್ಚಾಗಿ ಕಲಿಯುವವರಾಗಿದ್ದಾರೆ. ತಮ್ಮೆಲ್ಲರ ಘನೋದ್ದೇಶವೂ ದೇಶದಲ್ಲಿ ಸರ್ವರೂ ಅಕ್ಷರಸ್ಥರಾಗಿ, ವಿದ್ಯಾರ್ಥಿಗಳಾಗಿ, ಜ್ಞಾನಕಾಮರಾಗಿ, ಸತ್ಪ್ರಜೆಗಳಾಗಿ, ದೊಡ್ಡ ಬದುಕನ್ನು ಬದುಕಬೇಕೆಂಬುದೇ ಆಗಿದೆ. ಈ ಸಾಮಾನ್ಯರಾದ ಗಂಡಸರು ಹೆಂಗಸರು ಮಕ್ಕಳಿಗೆಲ್ಲ ವಿರಾಮ ಕಾಲವನ್ನು ಸದ್ವಿನಿಯೋಗ ಮಾಡುವುದಕ್ಕಾಗಿ ಸುಲಭವಾದ, ಪ್ರಯೋಜನಕಾರಿಯಾದ, ಶುಚಿಯಾದ, ಹರ್ಷಜನಕವಾದ ಸದ್ಬೋಧಕವಾದ ಪುಸ್ತಕಗಳನ್ನು ಎಷ್ಟುಮಟ್ಟಿಗೆ ಒದಗಿಸಿದ್ದೀರಿ? ಓದುವವರು ಕಡಿಮೆಯಾದರೆ, ಬರೆಯುವವರು ಇನ್ನೂ ಕಡಿಮೆ. ಒಕ್ಕಡೆ ನಮ್ಮ ಪುಸ್ತಕವನ್ನು ಕೇಳುವವರೇ ಇಲ್ಲವೆಂಬ ಕೂಗು. ಒಕ್ಕಡೆ ನಮ್ಮ ಹುಡುಗರಿಗೆ ಓದುವುದಕ್ಕೆ ಸರಿಯಾದ ಪುಸ್ತಕಗಳೇ ಇಲ್ಲವೆಂಬ ದೂರು....

"ನವಜೀವನದಲ್ಲಿ ಕಾಲಿಡುತ್ತಿರುವ, ನವದರ್ಶನವನ್ನು ಕೈಕೊಳ್ಳುತ್ತಿರುವ ಜನಸಾಮಾನ್ಯಕ್ಕೆ ಹಳಗನ್ನಡದ ಮತ್ತು ಬಲುಮಟ್ಟಿಗೆ ನಡುಗನ್ನಡದ ಕಾವ್ಯ ಮಾಲೆಯಿಂದ ಅಷ್ಟು ಹೆಚ್ಚಾದ ಪ್ರಯೋಜನವಾಗಲಾರದೆಂದು ನಾನು ಶಂಕಿಸುತ್ತೇನೆ. ಒಟ್ಟಿನ ಮೇಲೆ, ಅದು ಪುರಾತನ ಪ್ರಪಂಚದ ಸಾಹಿತ್ಯ. ಭಾಷೆ ಕಷ್ಟ; ಹಳಗನ್ನಡ ಹಾಗಿರಲಿ, ಅನಾವಶ್ಯಕವಾದ ಕನ್ನಡಕ್ಕೆ ಒಂದು ಪುಷ್ಟಿಯನ್ನಾಗಲಿ, ಶಕ್ತಿಯನ್ನಾಗಲಿ, ಸೌಂದರ್ಯವನ್ನಾಗಲಿ ಕೊಡದ ನಿಸ್ಸಾರವಾದ ಪುಸ್ತಕದ ಸಂಸ್ಕೃತ ಶಬ್ದಗಳಿಂದ ಹೆಣೆದುಕೊಂಡಿರುವ ಸೀಗೆಯ ಮೆಳೆ. ಶೈಲಿ ಸಾಧಾರಣವಾಗಿ ಕೃತಕ, ನೀರಸ—ಇನ್ನೂ ರೆಕ್ಕೆ ಬಲಿಯದೆ ಕುಪ್ಪಳಿಸುವ ಹಕ್ಕಿಯ ಮರಿಯಹಾಗೆ, ಸಣ್ಣ ಪದ್ಯಗಳಲ್ಲಿ ತೊಡರಿಕೊಂಡು ಕತ್ತರಿಸಿ ಬೀಳುವ ಸಣ್ಣ ಪುಟ್ಟ ವಾಕ್ಯಗಳು; ಕೆಲವು ನಿರುಕಾದ, ಆಡುವ ಮಾತಿನ ಮಟ್ಟವನ್ನು ಅಷ್ಟೇನೂ ಮೀರಿ ಏರದ, ವಾಕ್ಯರಚನೆ; ಮಾನವನ ವಿಶಾಲವಾದ ಮನೋವೃತ್ತಿಗಳನ್ನು ಛಾಯೆಯಂತೆ ಅನುಸರಿಸುವ ಪ್ರತಿಭಾವಿಷ್ಟವಾದ ಉದಾತ್ತ ವಾಣಿಯಲ್ಲ. ನುಡಿಗಳನ್ನು ಮುತ್ತಿನಂತೆ ಸೋಸಿ ಆಯುವ, ಮಿತವಾಗಿ ಬಳಸುವ, ಸೈನಿಕ ವ್ಯೂಹದಂತೆ ಸುಶಿಕ್ಷಿತವಾಗಿ ಒಮ್ಮೊನೆಗೆ ನುಗ್ಗುವ, ಬಣ್ಣಗಾರನಂತೆ ಅಲ್ಲಲ್ಲಿ ಬಣ್ಣವನ್ನು ತುಂಬುವ, ಸಮಯೋಚಿತವಾಗಿ ಸಹಜವಾಗಿ ಏರುವ, ಇಳಿಯುವ, ಸಮುದ್ರದ ತೆರೆಯಂತೆ ಹರಡಿ ಬೀಸುವ, ಹೊರಳುವ, ತಗ್ಗಿ ಕುಗ್ಗುವ, ಕುಲಸ್ತ್ರೀಯಂತೆ ಅರೆಮಾತಾಡುವ, ಮೌನದಿಂದಲೇ ಭಾವವನ್ನೂ ಸೂಚಿಸುವ ಜಾತಿ ವೀರನಂತೆ ಸಂದರ್ಭದಲ್ಲಿ ತಟಕ್ಕನೆ ವೀರಾವೇಶವನ್ನು ತಾಳುವ, ಹಾಗೆಯೇ ಶಾಂತವಾಗುವ, ಅಂತರ್ಯವನ್ನು ತೋರಿಸಿ ಮರಳ ಮೇಲೆ ನಗುನಗುತ ಹರಿಯುವ ಹೊಳೆಯಂತೆ ಸ್ಪಷ್ಟವಾಗಿ ಸ್ವಚ್ಛವಾಗಿ ಹರಿಯುವ ಅಲ್ಲಲ್ಲಿ ಮೊರೆಯುವ, ಧುಮುಕುವ, ಗಂಭೀರವಾಗಿ ತೂಗುವ, ನಲ್ಲೆಯ ಮೆಲ್ನುಡಿಯಂತೆ ಹೃದಯ ವೀಣೆಯ ತಂತಿಗಳನ್ನು ಮಿಡಿದು ನೋಯಿಸುವ, ನಲಿಸುವ ಅನಂತಾನಂತ ರೂಪವಾದ ಮಹಾವಾಣಿಯಲ್ಲ. ಶಾಸ್ತ್ರ ಶಿಕ್ಷೆಯನ್ನು ಪಡೆದಿರಬಹುದು; ಆಡಂಬರವಿರಬಹುದು; ಚಮತ್ಕಾರ, ಚೇಷ್ಟೆ, ಒಲಪು, ಒಯ್ಯಾರ ಎಲ್ಲ ಇರಬಹುದು. ಆದರೆ ಎಲ್ಲ ಪಾಮರ ರಂಜನೆ, ಒಂದು ಬಗೆಯ ಪಂಡಿತರಿಗೆ ಮಾತ್ರ ರಂಜನೆ. ಕಥೆಯನ್ನು ರಚಿಸುವುದೂ ಅಷ್ಟೆ; ವ್ಯಕ್ತಿಗಳನ್ನು ಚಿತ್ರಿಸುವುದೂ ಅಷ್ಟೆ; ರಸ, ಭಾವ, ವರ್ಣಗಳನ್ನು ಪ್ರತಿವಾದಿಸುವುದೂ ಅಷ್ಟೆ: ಏಕನಾದ, ಚರ್ವಿತ ಚರ್ವಣ, ಹರಿದ ಕಾಲುವೆಯಲ್ಲಿ ಪಾಚಿಗಟ್ಟಿ ಹರಿಯುವ ನೀರು. ವಿಷಯವೋ, ವೈರಾಗ್ಯ; ವೈರಾಗ್ಯದಲ್ಲಿ ಹುಟ್ಟಿದಾಗ ಶೃಂಗಾರ-ಎಂತಹ ಶೃಂಗಾರ! ಭಕ್ತಿ, ಜ್ಞಾನ, ಧರ್ಮ, ನೀತಿ, ಮಾನವ ಪ್ರಪಂಚ, ಪ್ರಕೃತಿ-ಇವೆಲ್ಲ ಉತ್ತಮ ಕವಿತಾ ವಿಷಯಗಳೇ ಅಹುದು: ಆದರೆ ಹೇಳುವ ರೀತಿ? ರಸಪುಷ್ಟಿ? ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿರುವ ಮಹಾ ಮಹಾಕವಿಗಳ ಪ್ರತಿಭೆಯೂ ಕಲ್ಪನಾ ಶಕ್ತಿಯೂ ಉದಾತ್ತ ಭಾವಗಳೂ ರಸಪ್ರವಾಹವೂ ಅದ್ಭುತ ಕವಿತಾ ದೃಷ್ಟಿಯೂ ಮನುಷ್ಯ ಜಾತಿಯ ನಾನಾವಿಧವಾದ ಅನುಭವಗಳೂ ಸಂಕಟಗಳೂ ಮಹತ್ಪ್ರಯತ್ನಗಳೂ ನಗೆಯೂ ಕಣ್ಣೀರೂ ಸೋಲೂ ಗೆಲುವೂ ಹೀಗೇ ಸರಿಯೆಂದು ನಿರ್ಣಯಕ್ಕೆ ಸಿಕ್ಕದ ಜೀವದ ರಹಸ್ಯವೂ ಆಶ್ಚರ್ಯವೂ ವೈವಿಧ್ಯವೂ ಸೌಂದರ್ಯವೂ ಭಯವೂ ಶಾಂತಿಯೂ ಮಂಗಳವೂ ಅಮಂಗಳವೂ ಆ ಅಮಂಗಳದಿಂದಲೇ ಮಂಗಳವನ್ನು ಹಿಂಡುವ ಆತ್ಮಶಕ್ತಿಯೂ ಉತ್ತಮ ಸಾಹಿತ್ಯಗಳ ಸಮಕ್ಕೆ ತೂಗಬಲ್ಲುವು, ನಮ್ಮ ಪೂರ್ವದ ಸಾಹಿತ್ಯದಲ್ಲಿ ಎಷ್ಟುಮಟ್ಟಿಗೆ ದೊರೆಯಬಹುದು? ಶುದ್ಧ ಕಲಾದೃಷ್ಟಿಯಿಂದ ಸಾಹಿತ್ಯ, ಕಾವ್ಯ ಎನ್ನಿಸಿಕೊಳ್ಳಬಹುದಾದ ಬರೆವಣಿಗೆ ನಮ್ಮ ಪೂರ್ವದ ಸಾಹಿತ್ಯದಲ್ಲಿ ಹೇರಳವಾಗಿದೆ ಎಂದು ಎಷ್ಟುಮಟ್ಟಿಗೆ ಧೈರ್ಯವಾಗಿ ಹೇಳಬಹುದು?....



ಜಮಖಂಡಿ ಸಾಹಿತ್ಯ ಸಮ್ಮೇಳನದಲ್ಲಿ 'ಶ್ರೀ'

"ಅಂತಹ ಉತ್ತಮ ಕಾವ್ಯಗಳೂ ಕಾವ್ಯಭಾಗಗಳೂ ಕನ್ನಡದಲ್ಲಿ ಬೇಕಾದಷ್ಟು ಇಲ್ಲದೆ ಇಲ್ಲ. ಈ ವಿಷಯದಲ್ಲಿ ನಾವು ಯಾರಿಗೂ ತಲೆ ತಗ್ಗಿಸಬೇಕಾಗಿಲ್ಲ; ಅಹೋ ರೂಪಂ! ಅಹೋ ಧ್ವನಿಃ! ಎಂದು ಬೆರಗಾಗುವ ಅಸಂಸ್ಕೃತರ ಜಳ್ಳು ಜಂಭಕ್ಕೆ ಮಾತ್ರ ನಾವು ತಲೆತಗ್ಗಿಸ ಬೇಕಾಗಿದೆ ಅಷ್ಟೆ! ಈಗ ಸುಮಾರು ಮೂವತ್ತು ವರ್ಷ ಗಳಿಂದ ನಾನು ಕನ್ನಡವನ್ನು ಪ್ರೀತಿಯಿಂದ ಓದುತ್ತಿದ್ದೇನೆ; ನಗುತ ಹೇಳಿದವರು ಕೆಡಹೇಳಿದರು ಎಂಬ ಪ್ರೀತಿಯಿಂದಲ್ಲ; ಬಯ್ದು ಹೇಳಿದವರು ಬದುಕ ಹೇಳಿದರು ಎಂಬ ಪ್ರೀತಿ ಯಿಂದ. ಉದಾರವಾದ ಸನಾತನ ಧರ್ಮ, ಉಜ್ವಲವಾದ ಭಕ್ತಿ, ಸಂಸಾರದ ದುಸ್ಸಹವಾದ ದುಃಖ, ಮರಣ ಪ್ರಲಾಪ, ನಿಸ್ಸಾರ ವಸ್ತುವಿನಲ್ಲಿ ವೈರಾಗ್ಯ, ವಿಘ್ನಕ್ಕೆ ಜಗ್ಗದ ತಪಸ್ಸು, ಶೌರ್ಯ, ಕಾರುಣ್ಯ, ರಾಗಾವೇಶ, ಕ್ಷಮೆ, ಪ್ರೇಮ, ಮಕ್ಕಳ ಬಯಕೆ, ಪ್ರಕೃತಿಯ ಚೆಲುವು ನೋಟಗಳಲ್ಲಿ ಆನಂದ—ಇವೇ ಮುಂತಾದ ನಮ್ಮ ಜನಕ್ಕೆ ಸ್ವಾಭಾವಿಕ ವಾದ, ಸರ್ವಸಾಧಾರಣವಾದ ಅನೇಕ ಲಕ್ಷಣಗಳನ್ನು, ಬಹು ಸುಖವಾಗಿ ಕಲಾಪ್ರಪಂಚದಲ್ಲಿ ಪ್ರತಿಬಿಂಬಿಸಿರುವುದು ನಮ್ಮ ಕನ್ನಡದಲ್ಲಿ ಬೇಕಾದಷ್ಟಿದೆ. ಏಕೆಂದರೆ, ನಮ್ಮ ಕವಿ ಗಳಲ್ಲಿ ಪ್ರಮುಖರಾದವರು ಎಷ್ಟೇ ಪಾಂಡಿತ್ಯದ ಹುಚ್ಚು ಹೊಳೆಯ ಸೆಳೆತಕ್ಕೆ ಸಿಕ್ಕಿದ್ದರೂ ಎಷ್ಟೇ ಶಾಸ್ತ್ರದ ನಿರರ್ಥಕವಾದ ನಿರ್ಬಂಧಗಳಿಗೆ ಕಟ್ಟುಬಿದ್ದಿದ್ದರೂ ಎಷ್ಟೇ ಆ ಕಾಲದ ಅಭಿರುಚಿಯ ಸಂಕೇತಗಳಿಗೆ ಅಂಧ ಪರಂಪರೆ ಯಾಗಿ ಮನ್ನಣೆಯನ್ನು ತೆತ್ತಿದ್ದರೂ ಎಷ್ಟೇ ತಮ್ ತಮ್ಮ ಮತ ಸಿದ್ಧಾಂತಗಳನ್ನೂ ರಾದ್ಧಾಂತ ಮಾಡಿ ವಿಸ್ತರಿಸಿ, ಲಂಬಿಸಿ, ಮರಳುಗಾಡಿನಲ್ಲಿ ಬಾಯಾರಿಕ ಯನ್ನಿಂಗಿಸುವ ಹೊಳೆ ಮುಚ್ಚಿಹೋಯಿತೆಂಬಂತೆ ತೀರ್ಥಂಕರರ, ಪುರಾತನ ಭಕ್ತರ, ಅವತಾರ ಪುರುಷರ ವೀರರ, ನಾಯಕರ, ದಿವ್ಯ ವಿಗ್ರಹಗಳನ್ನು ಸರ್ವ ಕಾಲ ದಲ್ಲಿಯೂ ಸರ್ವರೂ ಮೆಚ್ಚುವಂತೆ ಕಡೆದಿರಿಸಲಾರದ ಹೋದರೂ ಈ ಮತಾಭಿಮಾನಿಗಳಲ್ಲಿ, ಈ ಶಾಸ್ತ್ರ ಪಕ್ಷ ಪಾತಿಗಳಲ್ಲಿ, ಈ ಪಂಡಿತರಲ್ಲಿ, ಹೊಟ್ಟೆಯೊಳಗೆ ಒಬ್ಬ ಹುಟ್ಟುಕವಿ ಅವಿತುಕೊಂಡಿದ್ದರಿಂದ, ಆ ಹುಟ್ಟುಕವಿ ಸ ಯಾದ, ಸ್ವತಂತ್ರವಾದ, ಸಂಪೂರ್ಣವಾದ, ವಿವಿಧ ಮಹಾನುಭವ ಚೋದಿತವಾದ ಶುದ್ಧ ಕಲಾಜ್ಯೋತಿಯ ಬಿಸಿಲಿನಲ್ಲಿ ಹೊಮ್ಮಿ, ಬೆಳದಿಂಗಳಿನಲ್ಲಿ ಹೂವಾಗದಿದ್ದರೂ ಆ ಒಳಗಿದ್ದ ನಿಸರ್ಗ ಕವಿಯ ಪ್ರಭಾವದಿಂದ, ಶುಷ್ಕವಾದ ಅರಣ್ಯ ರೋದನದ ನಡುವೆ, ಸಮಯ ಬಂದ ಕೂಡಲೆ ಒಂದು ಕ್ಷಣದಲ್ಲಿ ಹೃದಯ ಹಿಗ್ಗಿ ರಸವು ಉಕ್ಕಿ, ಮರು ಭೂಮಿಯಲ್ಲಿ ತಣ್ಣೀರು ಕೊಳವು ಊರಿಬಂದಂತೆ, ಸುಗ್ಗಿಯ ಹೊಸ ಮಾವಿನ ಚಿಗುರನ್ನು ಸವಿದ ಕೋಗಿಲೆಯ ಕಂಠವ ಇಂಪಾದಂತೆ, ಈ ಪಂಜರದ ಹಕ್ಕಿಗಳು, ಈ ಬಲೆಯ ಜಿಂಕ ಗಳು, ನೆಗೆದು, ನುಡಿದು, ಹಾರಿ, ಹಾಡಿ, ಸರಸ್ವತಿ ಪ್ರಸಾದದ ಪೂರ್ಣರಮಣೀಯತೆಯನ್ನು ಸಹೃದಯರಿಗೆ ಅನುಭವ ಮಾಡಿಸಿಬಿಟ್ಟಿರುವರು."

---

" ಕನ್ನಡಿಗರೇ, ಏಳಿ, ಎಚ್ಚರಗೊಳ್ಳಿ, ಆರಂಬ ಮಾಡಿ . . . ನಾವು, ಕನ್ನಡಿಗರು, ಇಂದು, ಸತ್ತವರನ್ನು ಎಬ್ಬಿಸುವುದೇ ಅಲ್ಲ; ಬದುಕಿರುವವರನ್ನು ಎಚ್ಚರಗೊಳಿಸು ವುದಕ್ಕೆ ಹೊರಟಿರುವೆವು."



# ಬಿ. ಎಂ. ಶ್ರೀ.

* ಶ್ರೀರಂಗ




ದಿ|| ಬಿ. ಎಂ. ಶ್ರೀಕಂಠಯ್ಯನವರ ಸಂಪರ್ಕವು ಮೊದಲು ದಿ|| ಪಂಜೆ ಮಂಗೇಶರಾಯರ ಅಧ್ಯಕ್ಷತೆಯಲ್ಲಿ ನಡೆದ ರಾಯಚೂರ ಸಮ್ಮೇಳನದ ಸಂದರ್ಭದಲ್ಲಿ ಆಯಿತು. ೧೯೩೦ರಲ್ಲಿರಬಹುದು. ಅದರ ಮುಂಚಿನ ವರ್ಷದಲ್ಲಿಯೇ ನನ್ನ ಗೆಳೆಯರಾದ ಪ್ರೊ|| ಅ. ತು. ಸಾಸನೂರ ಅವರು ನನ್ನನ್ನು ಪರಿಷತ್ತಿನ ಸದಸ್ಯನನ್ನಾಗಿ ಮಾಡಿದ್ದರು. ನನಗೆ ಆಗ ಕನ್ನಡದ ಬಗ್ಗೆ ಹೆಚ್ಚಾಗಿ ಆಸಕ್ತಿ ಇದ್ದಿರಲಿಲ್ಲ. ಆದರೆ ಮೂರೂವರೆ ವರ್ಷಗಳ ಇಂಗ್ಲೆಂಡಿನ ವಾಸದಲ್ಲಿ ಪ್ರಜಾಪ್ರಭುತ್ವ ಮತ್ತು ವ್ಯಕ್ತಿ ಸ್ವಾತಂತ್ರ್ಯ ಈ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡ ೨೯ ವಯಸ್ಸಿನ ಯುವಕನಾದ ನನಗೆ ಅಂದಿನ ಪರಿಷತ್ತಿನಲ್ಲಿ ಇವೆರಡಕ್ಕೂ ಅವಕಾಶವಿಲ್ಲ ಎಂದೆನ್ನಿಸಿ ಅಲ್ಲಿ ನಡೆದ ವಾರ್ಷಿಕ ಅಧಿವೇಶನದಲ್ಲಿ ಅವರನ್ನು ಬಲವಾಗಿ ವಿರೋಧಿಸಿದೆ, ಪ್ರತಿಭಟಿಸಿದೆ. ಈಗ ನನ್ನ ೮೦ನೆಯ ವಯಸ್ಸಿನಲ್ಲಿ ಬಿ. ಎಂ. ಶ್ರೀ. ಅವರ ಅಂದಿನ ವಾದ ನನಗೆ ಅರ್ಥವಾಗುತ್ತಿದೆ. ಸಾಹಿತ್ಯಕ್ಕೆ ಸಂಬಂಧಿಸಿದ ಯಾವ ಸಂಸ್ಥೆಯಲ್ಲೂ ವ್ಯಕ್ತಿ ಸ್ವಾತಂತ್ರ್ಯಕ್ಕೆ ಸ್ಥಾನವಿದ್ದರೆ ಪ್ರಜಾಪ್ರಭುತ್ವಕ್ಕೆ ಸ್ಥಾನವಿಲ್ಲ ಎಂಬುದನ್ನು ಪರಿಷತ್ತಿನ ಇಂದಿನ ಸದಸ್ಯ ಸಂಖ್ಯೆಯನ್ನು ನೋಡಿ ನನಗನ್ನಿಸುತ್ತಿದೆ.

ಬಿ.ಎಂ.ಶ್ರೀ. ಅವರು ಕನ್ನಡ ಮತ್ತು ಪರಿಷತ್ತಿನ ಬಗ್ಗೆ ತೋರಿಸುತ್ತಿದ್ದ ಕಳಕಳಿಯನ್ನು ತೀರ ತಡವಾಗಿ ನಾನು ಮೆಚ್ಚಿದೆ. ಧಾರವಾಡಕ್ಕೆ, ಉತ್ತರ ಕರ್ನಾಟಕಕ್ಕೆ ಅವರನ್ನು ಮೇಲಿಂದ ಮೇಲೆ ಉಪನ್ಯಾಸಗಳಿಗಾಗಿ ಆಮಂತ್ರಿಸುವುದರಿಂದ ಅವರ ಋಣವನ್ನು ತುಸು ಮಟ್ಟಿಗೆ ಸಲ್ಲಿಸಿದೆ ಎನ್ನಬಹುದು. ನಿಜವಾಗಿ ಕನ್ನಡದ ಬಗ್ಗೆ ಜಾಗೃತಿ ಮತ್ತು ಅಭಿಮಾನ ನನ್ನಲ್ಲಿ ಮೂಡಲು ಅವರ ಉಪನ್ಯಾಸಗಳು ಬಹುಮಟ್ಟಿಗೆ ಪ್ರೇರಕವಾದವು. ಅಂದಿನ ಕಾಲದಲ್ಲಿ ಕನ್ನಡದ ಬಗ್ಗೆ ಕನ್ನಡಿಗರಲ್ಲಿ ಅಭಿಮಾನವನ್ನು ಮೂಡಿಸುವುದು ಮುಖ್ಯವಾಗಿತ್ತಾದರೂ ಕರ್ನಾಟಕದ ಏಕೀಕರಣದ ವಿಚಾರ ಅವರಿಗಿದ್ದಿತೆಂಬುದನ್ನು ಮುಂದೆ ವಿದ್ಯಾವರ್ಧಕ ಸಂಘದಲ್ಲಿ ಕಾರ್ಯಾಸಕ್ತನಾದ ನನಗೆ ಕಂಡುಬಂದಿತು. ಅದಕ್ಕೆಂದೇ ಕರ್ನಾಟಕ ವಿಶ್ವವಿದ್ಯಾಲಯದ ಚಳವಳದ ಅಂಗವಾಗಿ ಕೆಲವು ಕಾಲೇಜುಗಳನ್ನು ಸ್ಥಾಪಿಸುವ ವಿಚಾರ ಧಾರವಾಡದಲ್ಲಿ ಎರಡನೆಯ ಆರ್ಟ್ಸ್ ಕಾಲೇಜಿಗೆ (ಇಂದಿನ ಜನತಾ ಕಾಲೇಜು) ಅವರೇ ಮೊದಲ ಪ್ರಿನ್ಸಿಪಲ್‌ರಾಗಬೇಕೆಂದು ನಾನು ಹಟ ಹಿಡಿದೆ, ಅದರಲ್ಲಿ

[೧೨ನೇ ಪುಟ ನೋಡಿ]

# 'ಶ್ರೀ' ನನ್ನ ಕಣ್ಣೂ ಆದರು

## ✻ ವಿ. ಕೃ. ಗೋಕಾಕ್

ಬಿ. ಎಂ. ಶ್ರೀಯವರನ್ನು ನೆನೆನೆನೆದಷ್ಟೂ ಕಡಮೆ. ಬೆಳಗಾವಿಯಲ್ಲಿ ಸಮ್ಮೇಳನದ ಸಮಯದಲ್ಲಿ (೧೯೨೯) ಅದೇ ಬಿ.ಎ. ಮುಗಿಸಿದ್ದ ನಾನು ಬೇಂದ್ರೆಯವರೊಡನೆ ಅವರ ಸಮೀಪದಲ್ಲಿ ಕುಳಿತು ಅವರ ಸಾನ್ನಿಧ್ಯವನ್ನು ಅನುಭವಿಸಿದೆ. ಇಂಗ್ಲಂಡಿಗೆ ವಿದ್ಯಾಭ್ಯಾಸಕ್ಕೆ ಹೋಗುವ ಪೂರ್ವದಲ್ಲಿ ಮಾಸ್ತಿಯವರು ಕೊಟ್ಟ ಭೋಜನ ಕೂಟದಲ್ಲಿ ಅವರ ಜೊತೆಗಿದ್ದೆ. ಇಂಗ್ಲಂಡಿಗೆ ಹೋದಾಗ 'ಗೆಳೆಯನಿಗೆ' ಎಂಬರ್ಥದ ಪದ್ಯಪತ್ರವನ್ನು ಪಡೆದು ಸಂತೋಷಿಸಿದೆ. ಮರಳಿದ ಮೇಲೆ ಬೆಂಗಳೂರಿಗೆ ಹೋದಾಗ ಅವರ ಮನೆಗೆ ಹೋಗಿ ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸಿದೆ. ಕನ್ನಡದ ಕಣ್ಣಾದ ಬಿ.ಎಮ್.ಶ್ರೀ. ಅವರು ನನ್ನ ಕಣ್ಣೂ ಆದರೆ.

ಪ್ರತಿ ವರ್ಷ ಸಾಹಿತ್ಯ ಸಮ್ಮೇಲನದಲ್ಲಿ ಅವರ ಜೊತೆ ನನಗೆ ಒಂದು ಅನುಪಮ ಆನಂದವನ್ನು ತರುತ್ತಿತ್ತು.

ಧಾರವಾಡದ ಜನತಾ ಕಾಲೇಜಿಗೆ ಅವರು ಪ್ರಿನ್ಸಿಪಲ್ ಎಂದು ಬಂದಾಗ ವೀಸನಗರಕ್ಕೆ ಹೊರಟು ನಿಂತ ನನಗೆ ಅವರಲ್ಲಿ ಕಳುಹೂಟ ಮಾತ್ರ ದೊರೆಯಿತು. ಅವರೊಡನೆ ಹೆಚ್ಚು ದಿನ ಇರುವದಾಗಲಿಲ್ಲ.

ಅಕಸ್ಮಾತ್ತಾಗಿ ಅವರು ಕಳೆದು ಹೋದರು, ಇನ್ನೂ ಅನೇಕಾನೇಕ ವರ್ಷ ಈ ರತ್ನ ನಮ್ಮದೆಂದು ಹೆಮ್ಮೆ ಪಡುತ್ತಿದ್ದೆವು. ಆದರೂ ನಮ್ಮ ಸುದೈವ: ತಮ್ಮ ನಾಟಕ-ಕಾವ್ಯ-ವಿಮರ್ಶೆಗಳನ್ನು ಕನ್ನಡಿಗರಿಗೆ ಅವರು ಉಂಬಳಿ ಹಾಕಿಕೊಟ್ಟಿದ್ದಾರೆ. ಅವು ನಂದಾದೀಪಗಳಾಗಿ ಕಾಲಪುರುಷನ ನಡುಮನೆಯಲ್ಲಿ ಥಾಳೈಸುತ್ತವೆ.

# ಅರುಳ್* ಮರುಳು

ಅರುಳ ಪಡೆದ ನನ್ನ ಮನಕೆ
ಮರುಳು ಹಿಡಿದಿದೆ
ಹರಡಿ ಹಬ್ಬಿ ನನಗೆ ಮರುಳೊ
ಧರೆಗೊ ಎನಿಸಿದೆ ॥ ೧ ॥

ಕನಿಕರಿಸುವ ಮೊಗಗಳಿಲ್ಲ
ಕನಲುತಿರುವ ಮೊಗಗಳಿಲ್ಲ
ತನಿಸೊಗದೊಳು ಕನತ್ ಕಸಿಸಿ
ಮಿನುಗುವ ಮೊಗವೆಲ್ಲೆಡೆ ॥ ೨ ॥

ಮೇಲು ಕೀಳು ಸನುವೆಂಬೀ
ತೋಲನವಿಲ್ಲದ ನಿಜತೆ
ಸೋಲು ಗೆಲುವ ನೆಣಿಸದಿರವು
ಮೇಳವಿದೆ ಮಮತೆ ॥ ೩ ॥

ಮುದಿಯರೆಳೆಯರೊಂದಾಗುತ
ಮುದಗೊಂಡಿಹರೀ ದಿನ
ಹೃದಯವಂತವಾಯ್ತು ಲೋಕ
ಉದಿಸಿದಂತೆ ಹೊಸ ಮನ. ॥ ೪ ॥

—ಪು.ತಿ.ನ

* ಅರುಳ್— ಅನುಗ್ರಹ, ದಯೆ,
ಕೃಪೆ—of Course ಭಗವಂತನದು





# ಶ್ರೀಯವರ ನೂರನೆಯ ಹುಟ್ಟುಹಬ್ಬ ನೆನಪು

✻ ಎಸ್. ವಿ. ಪರಮೇಶ್ವರಭಟ್ಟ

ಹರಿದು ಹಂಚಿ ಹೋಗಿದ್ದ ಕನ್ನಡ ನಾಡು ಈಗ ಇರುವ ರೀತಿಯಲ್ಲಿಯಾದರೂ ಒಂದಾಗಿ ಕೂಡಿಕೊಂಡಿತು ಎಂಬ ನಮ್ಮ ಹಿಗ್ಗಿಗೆ ಕನ್ನಡಕ್ಕಾಗಿ ನಿಸ್ವಾರ್ಥ ಬುದ್ಧಿಯಿಂದ ದುಡಿದ ಶ್ರೀಯವರ ಅಕಳಂಕವಾದ ಸೇವೆಯೂ ಒಂದು ಕಾರಣ. ಅವರ ನಾಡು ನುಡಿಗಳ ಸೇವೆ ರಾಜಕೀಯದಿಂದ ದೂರವಾದದ್ದು, ಸಂಸ್ಕೃತಿ ಸಂವರ್ಧನೆಗೆ ಪೂರ್ಣವಾಗಿ ಬದ್ಧವಾದದ್ದು. ಸಂವಾದ, ಸಲ್ಲಾಪ, ಪ್ರಚಾರ, ಪ್ರವಾಸ, ದರ್ಶನ, ಸಂದರ್ಶನ, ಲೇಖನ, ಭಾಷಣ— ಇತ್ಯಾದಿಗಳಿಂದ ಶ್ರೀಯವರು ಜನರಲ್ಲಿ ಒಂದು ಒಳ ಎಚ್ಚರವನ್ನು ಮೂಡಿಸಿದರು. ಶ್ರೀಸಾಮಾನ್ಯನಲ್ಲಿ ಸುಪ್ತವಾಗಿದ್ದ ಗುಪ್ತವಾಗಿದ್ದ ಭಾಷಾಭಿಮಾನವನ್ನು ಎಚ್ಚರಗೊಳಿಸಿ, ಕೆರಳಿಸಿ ಅವರೆಲ್ಲ ನಾಡಿನ ಏಕತೆಯ ಕಡೆಗೆ ಹೇಗೆ ಹೇಗೆ ಹೋರಾಡಬೇಕು ಎಲ್ಲಿ ಎಲ್ಲಿ ಮುಂದಾಗಬೇಕು ಎಂಬುದನ್ನೆಲ್ಲ ತಿಳಿಯಹೇಳಿ, ಕನ್ನಡದ ಕಾರ್ಯವನ್ನು ಸಮರ್ಪಕವಾಗಿ ಸಮರ್ಪಣಭಾವದಿಂದ ನಡೆಸಿಕೊಂಡು ಹೋಗುವ ಒಂದು ಪಡೆಯನ್ನೇ ಅವರು ರೂಪಿಸಿದರು.

ನಮ್ಮ ಹಿಂದಿನ ಹಿರಿಯರು ಹೇಗೆ ಸತ್ವ ಸಂಪನ್ನರಾಗಿ ಬಾಳಿದರು, ಹೇಗೆ ಸತ್ವಸಂಪನ್ನರಾಗಿ ಬೆಳಗಿದರು, ಹೇಗೆ ಸಕ್ರಿಯವಾಗಿ ಸಂಸ್ಕೃತಿ ಸಂವರ್ಧನ ಕಾರ್ಯ ಕಲಾಪಗಳಲ್ಲಿ ಭಾಗಿಗಳಾದರು ಎಂಬಂತಹ ವಿಷಯಗಳನ್ನು ಕುರಿತು ಶ್ರೀಯವರು ಹಗಲಿರುಳೂ ಚಿಂತನ ಮಂಥನ ನಡೆಸಿದರು. ಟೀಕೆ ಟಿಪ್ಪಣಿಗಳನ್ನು ಗುರುತು ಮಾಡಿಕೊಂಡರು. ತಾವು ಶಾರದೆಯ ಸಾಮ್ರಾಜ್ಯದಲ್ಲಿ ಗುಪ್ತ ಭಕ್ತರಾಗಿದ್ದುಕೊಂಡು ಸರ್ವಭಾಷಾ ಸರಸ್ವತಿಯ ಪರಮೋಪಾಸಕರಾಗಿ ಜ್ಞಾನಾರ್ಜನೆಯಲ್ಲಿ ತೊಡಗಿದರು. ಒಂದು ತಪಸ್ಸು ಎಂಬಂತೆ

ದೇಶವಿದೇಶಗಳ ಪ್ರಾಚೀನ ಮತ್ತು ಅರ್ವಾಚೀನ ಕಾವ್ಯ ಶಾಸ್ತ್ರಗಳ ವಿಶೇಷವಾದ ಅಧ್ಯಯನದಿಂದ ತಮ್ಮ ಆತ್ಮ ಸಂಪುಷ್ಟವೂ ಸುಹೃಷ್ಟವೂ ಆಗುವಂತೆ ನೋಡಿಕೊಂಡರು. ಮಹತ್ತು ಬೃಹತ್ತುಗಳೆರಡರಲ್ಲಿಯೂ ಉಜ್ವಲೋಜ್ವಲ ವಾಗಿ ಬೆಳಗುತ್ತಿರುವ ಕಾವ್ಯರ್ಷಿಗಳ ರಸಸ್ನಾನದಲ್ಲಿ ಮಿಂದು ಮಿಂದು ಪುನೀತರಾದರು. ಗ್ರೀಕೇ, ಇಂಗ್ಲೀಷೇ, ಸಂಸ್ಕೃತವೇ, ತಮಿಳೇ, ಕನ್ನಡವೇ ? ಆ ಈ ಊ ಎನ್ನದೆ ಹೊಸಗಾಳಿ ಹೊಸಬೆಳಕು, ಹೊಸಕಂಪು ಹೊಸತಂಪು ಹೊಸ ಚೆಲುವು ಹೊಸ ನೋಟ ಇರುವ ಕಡೆಯಲ್ಲೆಲ್ಲಾ ನುಗ್ಗಿ ಹೋಗಿ ಲಗ್ಗೆ ಹಾಕಿ ಆ ಎಲ್ಲವನ್ನೂ ತಮ್ಮದನ್ನಾಗಿಸಿ ಕೊಂಡರು. ನೆಪೋಲಿಯನ್ ಬೋನಾಪಾರ್ಟಿಯ ಕಾರ್ಯ ವೈಖರಿಯನ್ನು ಕುರಿತು ಹೇಳುವಾಗ He Came He saw He Conquered ಎಂದು ಹೇಳುವುದುಂಟಷ್ಟೆ. ಸಂಸ್ಕೃತಿ ಕ್ಷೇತ್ರದಲ್ಲಿ ಶ್ರೀಯವರು ಹಾಗೆ ಬಂದು ಹಾಗೆ ನೋಡಿ ಹಾಗೆ ಗೆದ್ದು ಶ್ರೀಮಂತರಾಗಿಬಿಟ್ಟರು. ಇಂತಹ ಶ್ರೀಮಂತ, ಇಂತಹ ಧೀಮಂತ ಇಂತಹ ಅಮೃತ ಪುತ್ರ ನಾಡು ನುಡಿಗಳ ಮುಂಚೂಣಿಯಲ್ಲಿ ಅವುಗಳ ಪುರೋಭಿ ವೃದ್ಧಿಯ ನೇತಾರನಾಗಿ ನಿಂತನೆಂದರೆ ಏನಾದೀತು? ಏನಾಗುವುದಿಲ್ಲ.

ಲಿಪಿ ಸುಧಾರಣೆಯೆ ? ವಯಸ್ಕರ ಶಿಕ್ಷಣವೆ ? ಸ್ನಾತ ಕೋತ್ತರ ಶಿಕ್ಷಣದ ಪಠ್ಯ ಗ್ರಂಥಗಳ ಪರಿಷ್ಕೃತ ಮುದ್ರಣ ಗಳೆ? ಪರಿಷತ್ತಿನ 'ಕನ್ನಡ ನುಡಿ'ಯ ಪ್ರಕಟಣೆಯೆ? 'ಕನ್ನಡ ಬಾವುಟ' ಕೃತಿಯ ರಚನೆಯೆ 'ಕನ್ನಡ ಬಾವುಟ, ಎಂಬ ಹೆಸರಿನ ಸಂಕಲಿತ ಗ್ರಂಥವೊಂದರ ಪ್ರಕಣೆಯೆ? ನಾಡಿನ ಮೂಡು ಪಡು ತೆಂಕಣ ಬಡಗುಗಳಲ್ಲಿ ಎಡೆ ಎಡೆ ಯಲ್ಲಿ ನುಡಿಮೇಳಗಳ ಕೂಟವೆ? ಸಂಘ ಸಂಸ್ಥೆಗಳ ಸ್ಥಾಪನೆಯೆ ? ನಾಡ ಹಬ್ಬಗಳ ಕವಿ ಜಯಂತಿಗಳ ಉತ್ಸವ ಗಳೆ ? ಪೂರ್ವ ಸೂರಿಗಳ ಪ್ರಶಸ್ತಿ ಗ್ರಂಥಗಳ ಪ್ರಕಟಣೆಗಳೆ ? ಮಹಾನ್ ಕವಿಗಳ ಹಿರಿಮೆಗರಿಮೆಗಳ ಕುರಿತು ಅಧ್ಯಯನ ಗೋಷ್ಠಿಗಳೆ ? ವಿಚಾರ ಸಂಕಿರಣಗಳೆ ? ಚಿಕಿತ್ಸಕ ಬುದ್ಧಿಯ ವಿಚಾರ ವಿಮರ್ಶೆಗಳ ಪರಾಮರ್ಶ ಕೃತಿಗಳೆ ? ಅನ್ಯಭಾಷೆ ಗಳ ರಸವತ್ಕಾವ್ಯಗಳ ಸಮಗ್ರಾನುವಾದಗಳೆ ? ಸಂಗ್ರಹಾನು ವಾದಗಳೆ ? ಆ ಕಾಲಕ್ಕೆ ಏನೇನೆಲ್ಲ ಆಯಿತು ? ಎಷ್ಟೆಷ್ಟೆ ಆಯಿತು ? ಯಾರು ಲೆಕ್ಕ ಇಟ್ಟಿದಾರೆ ? ಯಾರು ಲೆಕ್ಕ ಕೊಟ್ಟಿದಾರೆ. ನವೋದಯ ಸಾಹಿತ್ಯದ ವಸಂತಾರಂಭ ಸಮಯದ ಒಂದು ಶ್ರೀಪುಂಸ್ಕೋಕಿಲ ಹಾಡಿದ್ದೇತಡ ಎಷ್ಟೆಷ್ಟು ಇನ್ನಿತರ ಶುಕ ಪಿಕ ಕಾಮಳ್ಳಿ ಪಿಕಳಾರ ಕಾಜಾಣಾದಿಗಳಿಂದ ಮುಕ್ತ ಕಂಠರಾಗಿ ಹಾಡಿದರು ? ನಾಡಿಗೆ ನಾಡೇ ಗಂಧವಹನ ಬೀಸುಂಬೊಲವಾಯಿತು. ನಾಡಿಗೆ ನಾಡೇ 'ಗಂಧರ್ವರ ಸೀಮೆ'ಯಾಗಿ ಬಿಟ್ಟಿತು ? ಮುಕ್ತಬಂಧ, ಮುಕ್ತಛಂದ ಕವಿತೆಯಲ್ಲಿ ಮಾತ್ರವಲ್ಲ ಸಮಸ್ತ ಜೀವರ ಜೀವನ ಸಮಸ್ತವೂ ಹಾಗೆ ಮುಕ್ತವಾಗಿ ಬಿಟ್ಟಿತು ; ಹನ್ನೆರಡನೆಯ ಶತಮಾನದಲ್ಲಿ ಒಮ್ಮೆ ಆದ ಹಾಗೆ ! ಹಾಗೆ ನೋಡಿದರೆ ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಯ ಶ್ರೀಕ್ಷೇತ್ರದಲ್ಲಿ ದುಡಿದವರಲ್ಲಿ ಶ್ರೀಯವರಿಗೆ ಅಗ್ರಪೂಜೆ ಸಲ್ಲುವುದು ನ್ಯಾಯ ಸಮ್ಮತವೇ. ಶ್ರೀಯವರ ನೂರನೆಯ ಹುಟ್ಟುಹಬ್ಬದ ಈ ದಿನಗಳಲ್ಲಿ ನನ್ನ ಈ ಬರಹದ ಮೂಲಕವಾಗಿ ನಾಲ್ಕು ದೂರ್ವಾಂಕುರಗಳನ್ನು ಈ ಅಗ್ರ ಪೂಜೆಯಲ್ಲಿ ಸಮರ್ಪಿಸುವ ಭಾಗ್ಯ ನನ್ನದಾಯಿತು.

ಇದಕ್ಕಿಂತ ಮಿಗಿಲಾದ ಭಾಗ್ಯ ನನಗೆ ತಾನೆ ಬೇ ಏನಿದೆ ಹೇಳಿ.

---

[೯ನೇ ಪುಟದಿಂದ]

ಯಶಸ್ವಿಯೂ ಆದೆ. ಅವರ ಯೋಗ್ಯತೆಯ ಪ್ರಭಾವ, ಅವರ ವಿದ್ವತ್ತೆಯ ಅನುಭವ ನನಗಾದುದಕ್ಕೆ ಇದೇ ಸಾಕ್ಷಿ ಯಾಗಿದೆ.

ನನ್ನ ಸ್ವಭಾವದ ವೈಚಿತ್ರ್ಯಕ್ಕಾಗಿ ಮತ್ತು ವಯಸ್ಸಿನ ಅಂತರಕ್ಕಾಗಿ ಅವರ ನಿಕಟ ಪರಿಚಯ ನನಗಾಗಲಿಲ್ಲ. ಭಿನ್ನಾಭಿಪ್ರಾಯವನ್ನು ಅವರು ಸಹಸಾ ತಡೆದುಕೊಳ್ಳು ತ್ತಿಲ್ಲವಾದ್ದರಿಂದ ನಮ್ಮಿಬ್ಬರಲ್ಲಿ ವ್ಯಾವಹಾರಿಕ ಅಂತರ ಉಳಿದು ಬಂದರೂ ಕಾಲ ಸರಿದಂತೆ ಅವರ ಬಗ್ಗೆ ನನ್ನ ಆದರ ಬೆಳೆಯಿತು. ಅಂದಿನ ದೇಶೀಯ ಸಂಸ್ಥಾನಗ ವಾತಾವರಣದ ಹೊರಗೆ ಅವರು ಬೆಳೆದಿದ್ದರೆ ಕರ್ನಾಟಕಕ್ಕೆ ಅವರು ಆದರ್ಶಪ್ರಾಯ ಮುಂದಾಳಾಗುತ್ತಿದ್ದರಲ್ಲ ಎಂದ ಅನೇಕ ಸಲ ನಾನು ಹಳಹಳಿಸಿದ್ದೇನೆ. ವಿದ್ವತ್ತೆ ಪಾಂಡಿತ್ಯ, ಇಂಗ್ಲಿಷ್-ಕನ್ನಡಗಳ ಮೇಲೆ ಅವರ ಪ್ರಭುತ್ವ ಪರಿಣಾಮಕಾರಕವಾದ ಮಾತುಗಾರಿಕೆ, ನಾಡು-ನುಡಿಗ ಬಗ್ಗೆ ಕಳಕಳಿ—ಇವೆಲ್ಲವನ್ನೂ ಒಳಗೊಂಡ ಹಿರಿಯ ಅವರ ತರುವಾಯ ಯಾರೂ ನಮಗೆ ದೊರೆತಿ ದೊರೆಯುವ ಲಕ್ಷಣಗಳೂ ಇಲ್ಲ.



# ಆಚಾರ್ಯ ಶ್ರೀಯವರು




✻ ಎಚ್. ಎಂ. ಶಂಕರನಾರಾಯಣರಾವ್

"'ಕನ್ನಡ ನುಡಿ' ತಮ್ಮ ಗಮನಕ್ಕೆ ಬಂತೆ ?"

ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಪಾಲರ ಕೊಠಡಿಯಿಂದ ಹೊರಬರುತ್ತಿದ್ದ ಶ್ರೀಯವರು ಅಲ್ಲಿಯೇ ನಿಂತಿದ್ದ ನನ್ನನ್ನೂ ಶ್ರೀ ಪರಮೇಶ್ವರ ಭಟ್ಟರನ್ನೂ ಕಂಡು ಈ ಪ್ರಶ್ನೆಯನ್ನು ಕೇಳಿದರು. ೧೯೩೮ನೆಯ ವರ್ಷದ ಕೊನೆಯ ಭಾಗವೆಂದು ತೋರುತ್ತದೆ. ಬಿ. ಎಂ. ಶ್ರೀಕಂಠಯ್ಯನವರು ಕರ್ಣಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷ ಪದವಿಯನ್ನು ವಹಿಸಿಕೊಂಡು ಸ್ವಲ್ಪ ಕಾಲವಾಗಿತ್ತು. ಕನ್ನಡ ನಾಡಿನಲ್ಲಿ ನಡೆಯುವ ಸಮಸ್ತ ಕನ್ನಡದ ಚಟುವಟಿಕೆಗಳನ್ನು ನಿರೂಪಿಸತಕ್ಕ ಪತ್ರಿಕೆಯ ಅವಶ್ಯಕತೆಯನ್ನು ಮನಗಂಡು, ಪತ್ರಿಕೆಯ ರೂಪರೇಖೆಗಳನ್ನು ಚಿಂತಿಸಿ ಅದಕ್ಕೆ 'ಕನ್ನಡ ನುಡಿ'ಯೆಂದು ಹೆಸರಿಟ್ಟು, ವಾರಪತ್ರಿಕೆಯಾದ ಅದರ ಸಂಪಾದಕತ್ವವನ್ನು ಶ್ರೀ ಅ. ನ. ಕೃಷ್ಣರಾಯರಿಗೆ ವಹಿಸಿದ್ದರು. ಅವರ ಸಂಪಾದಕತ್ವದಲ್ಲಿ ಆಗಲೇ ಒಂದೆರಡು ಸಂಚಿಕೆಗಳು ಹೊರ ಬಂದಿದ್ದವು.

"ವಾರ ವಾರವೂ ಅದನ್ನು ಕೊಂಡು ಓದುತ್ತಿದ್ದೇವೆ."

ನಮ್ಮ ಮಾತನ್ನು ಕೇಳಿ ಶ್ರೀಯವರಿಗೆ ಆನಂದವಾಯಿತು. ಮತ್ತೆ ಅವರು ಹೇಳಿದರು. "ನೋಡಿ, ಹರಿಹಂಚಾಗಿರುವ ಕನ್ನಡ ನಾಡು ಒಂದಾಗಬೇಕು. ಅದಕ್ಕಿಂತ ಮುಂಚೆ ಮೈಸೂರಿನವರು, ಧಾರವಾಡದವರು, ಮಂಗಳೂರಿನವರು ಒಬ್ಬರ ಮನಸ್ಸನ್ನು ಒಬ್ಬರು ಅರಿಯಬೇಕು. ಅದಕ್ಕಾಗಿ ಈ ಪ್ರಯತ್ನ. 'ಕನ್ನಡ ನುಡಿ' ನಾಡು ನುಡಿಗಳ ಸಮಸ್ತ ಚಟುವಟಿಕೆಗಳನ್ನು ಒಳಗೊಳ್ಳಬೇಕು. ಇದು ಕನ್ನಡದ ಗೆಜಿಟಿಯರ್ ಆಗಬೇಕು. ಇದಕ್ಕೆ ನಿಮ್ಮ ಸಹಕಾರ ಬೇಕು." ಎಂದು ಹೇಳಿ ನಮ್ಮನ್ನು ಬೀಳ್ಕೊಟ್ಟರು.

ಶ್ರೀಯವರು ಅಂದು ಸ್ಥಾಪಿಸಿದ 'ಕನ್ನಡ ನುಡಿ' ಅನೇಕ ಲೇಖಕರಿಗೆ ಪ್ರೋತ್ಸಾಹ ಕೊಡುತ್ತ ವಾರಪತ್ರಿಕೆಯಾಗಿ, ಮಾಸಪತ್ರಿಕೆಯಾಗಿ, ಪಕ್ಷಪತ್ರಿಕೆಯಾಗಿ ಇಂದಿಗೂ ನಡೆದು ಬರುತ್ತಿದೆ.

* * *

ಬಿ. ಎಂ. ಶ್ರೀಕಂಠಯ್ಯನವರ ವಿದ್ವತ್ತನ್ನು ಇಲ್ಲಿ ಪ್ರತ್ಯೇಕವಾಗಿ ಪ್ರಶಂಸೆ ಮಾಡಬೇಕಾಗಿಲ್ಲ. 'ನಿಮ್ಮ ಮನೆಯ ಎಲ್ಲ ಕಿಟಕಿಗಳನ್ನೂ ತೆರೆಯಿರಿ. ಬೆಳಕು ಎತ್ತಲಿಂದ ಬಂದರೂ ಅದನ್ನು ಸ್ವಾಗತಿಸಿ. ಕನ್ನಡ ನಾಡಿಗೆ ಕನ್ನಡವೇ ಗತಿ, ಬೇರೊಂದು ಭಾಷೆಯಲ್ಲ; ಅದನ್ನು ಉಳಿಸಬೇಕು, ಬೆಳಸಬೇಕು' ಎಂಬ ತತ್ವವನ್ನು ದೃಢವಾಗಿ ನಂಬಿದ್ದ ಅವರು, ಮೊದಲಿನಿಂದಲೂ ಕನ್ನಡವನ್ನು ಹೊಸಕಾಲುವೆಗಳ ಮೂಲಕ ಕೊಂಡೊಯ್ಯಲು ವಿಶೇಷ ಸಿದ್ಧತೆಯನ್ನು ಮಾಡಿಕೊಂಡರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರೂ ಹಾಗೂ

ಕನ್ನಡದ ಗೌರವ ಪ್ರಾಧ್ಯಾಪಕರಾಗಿದ್ದ ಅವರು ಈ ಎರಡು ಭಾಷೆಗಳಲ್ಲಿ ಅದ್ವಿತೀಯವಾದ ಪಾಂಡಿತ್ಯವನ್ನು ಸಂಪಾದಿಸಿಕೊಂಡರು. ಈ ಎರಡು ಭಾಷೆಗಳ ವಿದ್ವತ್ತಿಗೆ ಪೂರಕವಾಗುವಂತೆ ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳ ಉದ್ದಾಮ ಕೃತಿಗಳನ್ನು ಮನನ ಮಾಡಿ ಅವುಗಳನ್ನು ಸ್ವಾಧೀನಪಡಿಸಿಕೊಂಡರು. ಸಂಸ್ಕೃತ, ತಮಿಳು ಭಾಷಾ ಸಾಹಿತ್ಯಗಳ ಹಿರಿಮೆಯನ್ನು ಕಂಡುಕೊಂಡು ಮೂಲದಲ್ಲಿಯೇ ಅಲ್ಲಿನ ಮುಖ್ಯ ಕೃತಿಗಳನ್ನು ಅಭ್ಯಾಸ ಮಾಡಿದರು. ಈ ಎಲ್ಲ ಭಾಷೆಗಳ ಸಾಹಿತ್ಯಗಳ ಅಭ್ಯಾಸಗಳಿಂದ ಕನ್ನಡಕ್ಕೆ ಆಗತಕ್ಕ ಉಪಯೋಗವನ್ನು ಮನಗಂಡರು. ಎಲ್ಲಕ್ಕೂ ಮಿಗಿಲಾಗಿ ವಿಶ್ವಧರ್ಮಗಳ, ನಾಗರಿಕತೆಯ ಸ್ವರೂಪವನ್ನು ಕರಗತಮಾಡಿಕೊಂಡರು. ಇಷ್ಟೆಲ್ಲ ಸಿದ್ಧತೆಗಳನ್ನು ಮಾಡಿಕೊಂಡ ಮೇಲೆ ಶ್ರೀಯವರು ಕನ್ನಡದ ಪ್ರಚಾರಕರಾಗಿ ಹೊರಬಂದರು.

ಕನ್ನಡದ ಪ್ರಚಾರಕರಾಗಿ ಶ್ರೀಯವರು ಕೆಲಸ ಮಾಡಿದ ಕ್ಷೇತ್ರಗಳು ಅನೇಕ. ನೆನಪಿಗೆ ಬಂದ ಕೆಲವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಅವರು ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಪದವಿಯಲ್ಲಿದ್ದಾಗ ಕನ್ನಡ ಎಂ ಎ. ತರಗತಿಗಳನ್ನು ತೆರೆಯಲು ಏರ್ಪಡಿಸಿದರು. ಇದರಿಂದ ಆದ ಪ್ರಯೋಜನವೆಷ್ಟು ! ಶ್ರೀಯುತರಾದ ಟಿ. ಎಸ್. ವೆಂ. ಮತ್ತು ಎ. ಆರ್. ಕೃ. ಇವರುಗಳು ಈಗಾಗಲೇ ಶ್ರೀಯವರ ಪಟ್ಟ ಶಿಷ್ಯರಾಗಿದ್ದರು. ಈಗ ಸರ್ವಶ್ರೀ ಕುವೆಂಪು, ತೀ. ನಂ. ಶ್ರೀ., ಡಿ. ಎಲ್. ಎನ್. ಮೊದಲಾದ ಶ್ರೇಷ್ಠರಾದ ವಿದ್ವಾಂಸರು ಕನ್ನಡದ ಸೇವೆಗೆ ಬದ್ಧ ಕಂಕಣರಾಗುವಂತಾಯಿತು. ಅಲ್ಲದೆ ಉಸ್ಮಾನಿಯಾ ವಿಶ್ವವಿದ್ಯಾನಿಲಯದಲ್ಲಿ ಉಚ್ಚ ಕನ್ನಡ ಪೀಠವನ್ನು ತೆರೆಯಲು ನಾಂದಿಯಾಯಿತು. ಹೊಸ ಕನ್ನಡದಲ್ಲಿ ವಿದ್ವತ್ತನ್ನು ಪಡೆಯಲು ಸಹಾಯಕವಾದ 'ಕನ್ನಡ ಕೈಪಿಡಿ' ರಚಿತವಾದದ್ದು, 'ಮೈಸೂರು ವಿಶ್ವವಿದ್ಯಾನಿಲಯ ಗ್ರಂಥಮಾಲೆ'ಯ ಪ್ರಕಟನೆಯ ಏರ್ಪಾಟು ನಡೆದದ್ದು ಈ ಕಾಲದಲ್ಲಿಯೇ. ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಕನ್ನಡದ ಪ್ರಚಾರಕ್ಕಾಗಿ 'ಕನ್ನಡ ನುಡಿ'ಯೆಂಬ ವಾರ ಪತ್ರಿಕೆಯನ್ನು ಹೊರಡಿಸಿ, ಪರಿಷತ್ತಿನ ಮುದ್ರಣದ ಅಗತ್ಯಗಳ ಪೂರೈಕೆಗಾಗಿ ತಮ್ಮ ಸ್ವಂತ ಹಣದಲ್ಲಿ ಅಚ್ಚುಕೂಟವೊಂದನ್ನು ಸ್ಥಾಪಿಸಿದರು. ಶ್ರೀಯವರಿಗೆ ನಮ್ಮ ಸರ್ಕಾರದಲ್ಲಿ ಹೆಚ್ಚಿನ ಪದವಿ, ಅಧಿಕಾರಗಳು ದೊರಕಿದ್ದರೆ ಕನ್ನಡಕ್ಕೆ ಹೆಚ್ಚು ಲಾಭವಾಗುತ್ತಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ.

ಆದರೂ ಶ್ರೀಯವರು ಕವಿಗಳಾಗಿ, ಲೇಖಕರಾಗಿ
ಸಮ್ಮೇಳನಗಳ ಅಧ್ಯಕ್ಷರಾಗಿ, ಸಂಘ ಸಂಸ್ಥೆಗಳ ಮುಖ್ಯಸ
ರಾಗಿ ಕನ್ನಡದ ಕೆಲಸಕ್ಕೆ ಮಾರ್ಗದರ್ಶನ ಮಾಡಿದರು
ಅವರ 'ಇಂಗ್ಲಿಷ್ ಗೀತಗಳು', 'ಗದಾಯುದ್ಧ ನಾಟಕಂ'
'ಅಶ್ವತ್ಥಾಮನ್' ಈ ಕೃತಿಗಳು ಕನ್ನಡ ಸಾಹಿತ್ಯ ರಂ
ದಲ್ಲಿ ತಂದ ಅದ್ಭುತವಾದ ಮಾರ್ಪಾಟುಗಳನ್ನು ಇಲ್ಲಿ ಮತ್ತೆ
ವರ್ಣಿಸಬೇಕಾಗಿಲ್ಲ; ಇಂದು ಅವು ಕನ್ನಡಿಗರ ಮ
ಮಾತಾಗಿವೆ. ಕನ್ನಡ ಕೈಪಿಡಿಗೆ ಬರೆದಿರುವ ಅವ
'ಕನ್ನಡ ಛಂದಸ್ಸಿನ ಚರಿತ್ರೆ' ಕನ್ನಡ ವಿದ್ವತ್ಪ್ರಪಂಚದ
ಹೊಸ ಆಯಾಮವನ್ನೇ ತೆರೆಯಿತು. ಶ್ರೀಯವರ ಗುಲ್ಬರ
ಸಾಹಿತ್ಯ ಸಮ್ಮೇಳನ (೧೯೨೮)ದ ಅಧ್ಯಕ್ಷ ಭಾಷಣ
ಮತ್ತು ಇತರ ಭಾಷಣಗಳು ಇಂದಿಗೂ ಹೊಸಗನ್ನ
ಭಾಷಾ ಸಾಹಿತ್ಯಗಳು ಮುಂದುವರೆಯಲು ಅನುಸರಿ
ಬೇಕಾದ ಮಾರ್ಗವನ್ನು ನಿರ್ದೇಶಿಸುತ್ತಿವೆ. ಅಲ್ಲ
'ಇಂಗ್ಲಿಷ್ ಗೀತಗಳು', 'ಅಶ್ವತ್ಥಾಮನ್', 'ಪಾ
ಸಿಕರು' ಈ ಕೃತಿಗಳು ಅಚ್ಚಗನ್ನಡದ ಸ್ವರೂಪ ಸಾಮರ್ಥ್ಯ
ಗಳನ್ನು ನಿರ್ದೇಶಿಸುತ್ತವೆ ಹಾಗೂ ಹಾಳತವಾದ ಸಂಸ್ಕೃ
ಪದಗಳ ಪ್ರಯೋಗವನ್ನು ಅವರ ಗದ್ಯದಲ್ಲಿ ಸಂಸ್ಕೃ
ಪದಗಳು ಸ್ವಲ್ಪ ಹೆಚ್ಚಾಗಿ ನುಸುಳುತ್ತವೆಯೇನೋ
ಅವರ ಕಾಲದಲ್ಲಿ ಕನ್ನಡದ ಕೆಲಸವೇನಾದರೂ ಆ
ಬೇಕಿದ್ದರೆ ಜನತೆ, ಸರ್ಕಾರ ಶ್ರೀಯವರ ಕಡೆಗೇ ಕೈ
ತೋರಿಸುತ್ತಿತ್ತು. ವಿದ್ಯಾಭ್ಯಾಸದ ಇಲಾಖೆಯ ಪ್ರೋತ್ಸಾಹ
ದಿಂದ ನಡೆಯುತ್ತಿದ್ದ 'ವಿದ್ಯಾದಾಯಿನಿ' ಎಂಬ ಮಾಸ
ಪತ್ರಿಕೆಗೆ ಕೆಲವು ಕಾಲ ಅಧ್ಯಕ್ಷರಾಗಿದ್ದು ಅದರ ಪರಿ
ಯನ್ನು ವಿಸ್ತರಿಸಿದರು. ಮಕ್ಕಳಿಗೆ ಒಂದು ವಿಶ್ವಕೋ
ದಂತಿರಬೇಕೆಂಬ ಉದ್ದೇಶದಿಂದ ಪ್ರೈಮರಿ ಮತ್ತು
ಮಾಧ್ಯಮಿಕ ತರಗತಿಗಳ ರೀಡರುಗಳ ಪರಿಷ್ಕರಣ ಸಮಿತಿ
ಅಧ್ಯಕ್ಷರಾಗಿದ್ದು ಆ ಕಾರ್ಯವನ್ನು ಅಚ್ಚುಕಟ್ಟಾ
ನಿರ್ವಹಿಸಿದರು. ಇದಲ್ಲದೆ ಇಂಗ್ಲಿಷ್-ಕನ್ನಡ ನಿಘಂಟಿ
ಸಂಪಾದಕ ಸಮಿತಿಯ ಸದಸ್ಯರಾಗಿ, ಕನ್ನಡ-ಕನ್ನ
ನಿಘಂಟಿನ ಸಲಹಾ ಸಮಿತಿಯ ಸದಸ್ಯರಾಗಿ, ರಾಜ್ಯ
ವಯಸ್ಕರ ಶಿಕ್ಷಣ ಸಮಿತಿಯ ಪ್ರಥಮ ಅಧ್ಯಕ್ಷರಾ
ಅಮೋಘವಾದ ಸೇವೆ ಸಲ್ಲಿಸಿದ್ದಾರೆ ಶ್ರೀಯವರು
ಒಟ್ಟಿನಲ್ಲಿ ಕನ್ನಡವನ್ನು ಮೇಲೆತ್ತುವುದಕ್ಕಾಗಿ ಬಿಡುವಿಲ್ಲ
ಕಾರ್ಯಕ್ರಮ ಅವರದು.

ಇಂಗ್ಲಿಷ್ ಪ್ರಾಧ್ಯಾಪಕರಾಗಿ ಮೈಸೂರು-ಬೆಂ
ಳೂರು ಕಾಲೇಜುಗಳಲ್ಲಿ ಶ್ರೀಯವರು ಇಂಗ್ಲಿಷ್ ಭಾಷ
ಸಾಹಿತ್ಯಗಳನ್ನೂ, ಗೌರವ ಕನ್ನಡ ಪ್ರಾಧ್ಯಾಪಕರಾ

ಕನ್ನಡ ಛಂದಸ್ಸು, ಭಾಷಾ ಸಾಹಿತ್ಯ, ಪಾಶ್ಚಾತ್ಯ ಕಾವ್ಯ ಮೀಮಾಂಸೆಗಳನ್ನು ಬೋಧಿಸುತ್ತಿದ್ದರು. ಇವರ ಬೋಧನೆ ವಿದ್ಯಾರ್ಥಿಗಳ ಮೇಲೆ ಎಷ್ಟು ಪರಿಣಾಮಕಾರಿಯಾಗಿರುತ್ತಿತ್ತೆಂದರೆ, ಇವರ ಉಪನ್ಯಾಸಗಳನ್ನು ಕೇಳಲು ವರ್ಷಾಂತ್ಯದಲ್ಲಿ ಬೆಂಗಳೂರಿನ ವಿದ್ಯಾರ್ಥಿಗಳು ಮೈಸೂರಿಗೆ ಬರುತ್ತಿದ್ದರೆಂದು ನೊನ್ನೆ ಅವರ ಶಿಷ್ಯರಾಗಿದ್ದ ಹಿರಿಯರೊಬ್ಬರು ಹೇಳಿದರು. ಅದಿರಲಿ. ಶ್ರೀಯವರು ಕನ್ನಡವನ್ನು ಎತ್ತಿ ಹಿಡಿಯಲು ಕೈಗೆತ್ತಿಕೊಂಡ ಕಾಲದಲ್ಲಿ ಹಳಗನ್ನಡ ನಡುಗನ್ನಡ ಕಾವ್ಯಗಳು ಒಂದೊಂದಾಗಿ ಅಚ್ಚಾಗಿ ಹೊರಬೀಳುತ್ತಿದ್ದವು. ಇವುಗಳಲ್ಲಿ ಎಲ್ಲವೂ ಶ್ರೇಷ್ಠವಾದುವೆಂದಲ್ಲ. ಆದರೂ ಇವುಗಳ ಸಾರ ಜನಸಾಮಾನ್ಯರಿಗೆ ವಿದ್ಯಾರ್ಥಿಗಳಿಗೆ ದೊರಕಬೇಕೆಂಬ ಘನೋದ್ದೇಶದಿಂದ ವಿಶ್ವವಿದ್ಯಾನಿಲಯದ ಮೂಲಕ ಕೆಲವು ಕಾವ್ಯಗಳನ್ನೂ ಸಂಗ್ರಹಗಳನ್ನೂ ಹೊರತಂದರು. ಎಲ್ಲಕ್ಕೂ ಮಿಗಿಲಾಗಿ ಶ್ರೀಯವರು ತಮ್ಮ ವ್ಯಕ್ತಿತ್ವದಿಂದ, ವಿದ್ವತ್ತಿನಿಂದ, ಸಹೃದಯತೆಯಿಂದ, ಕಂಠಶ್ರೀಯಿಂದ ಕನ್ನಡದ ಪ್ರಮುಖ ಕಾವ್ಯಗಳನ್ನು ಜನರಲ್ಲಿ ಪ್ರಚಾರ ಮಾಡಿದರು. ಅವರ ಉಪನ್ಯಾಸಗಳು ಸುದೀರ್ಘವಾಗಿರುತ್ತಿದ್ದುವೆಂಬುದೇನೋ ನಿಜ. ಇದಕ್ಕೆ ಮುಖ್ಯಕಾರಣ ಒಂದು ಕಾವ್ಯದ ಸ್ವಾರಸ್ಯ ಅಖಂಡವಾಗಿ ಒಂದೇ ಬಾರಿಗೆ ದೊರಕಬೇಕೆಂಬುದು ಅವರ ಉದ್ದೇಶವಾಗಿರುತ್ತಿತ್ತು. ವೇದಿಕೆಯ ಮೇಲೆ ನಿಂತು ಸಭಿಕರ ಗಮನವೆಲ್ಲ ತಮ್ಮೆಡೆಗೆ ಕೇಂದ್ರೀಕೃತವಾಗುವಂತೆ ಮಾಡಿ, ಅರ್ಧ ಕಣ್ಮುಚ್ಚಿ, ವಾಚೋವಿಧೇಯವಾದ ಯಾವ ಕಾವ್ಯವನ್ನೇ ಆಗಲಿ ಶ್ರೀಯವರು ವಾಚನ ಮಾಡುತ್ತಿದ್ದರೆ ಕಾಲ ಸ್ತಬ್ಧವಾದಂತೆ ತೋರುತ್ತಿತ್ತು. ಶ್ರೋತೃಗಳು ಚಿತ್ರದ ಬೊಂಬೆಗಳಂತೆ ಕಾಣುತ್ತಿದ್ದರು. ಶ್ರೀಯವರು ಕಾವ್ಯದಲ್ಲಿ ಬರುತ್ತಿದ್ದ ಒಂದೆರಡು ಮುಖ್ಯ ಪದಗಳನ್ನು ಕುರಿತು ವ್ಯಾಖ್ಯಾನ ಮಾಡುತ್ತಿದ್ದರೆ ತಮ್ಮ ವಾಚನದಿಂದಲೇ ಅವರು ರಸಾಸ್ವಾದನಕ್ಕೆ ದಾರಿಮಾಡಿಕೊಡುತ್ತಿದ್ದರು. ನನಗೆ ನೆನಪಿರುವಂತೆ ಒಮ್ಮೆ ಪಂಪಭಾರತದ ಮೇಲೆ ಉಪನ್ಯಾಸ ಮಾಡುತ್ತಿದ್ದಾಗ ‘ ಕೆಳೆಯನೈ ರಾಧೇಯ ’, ‘ ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ’ ಎಂಬ ಸಾಲುಗಳನ್ನು ಓದಿದಾಗ ಸಭಿಕರು ಥಟ್ಟನೆ ಕಣ್ಣೀರು ಕರೆದುದುಂಟು. ಹಾಗೆಯೇ ಅದೇ ಕಾವ್ಯದ ‘ಗುಣಮನಿಂತು ಪಿಕ್ಕದಿರಿಂ ’ ಎಂಬಲ್ಲಿಯ ‘ ಪಿಕ್ಕು’, ಜನ್ನನ ಯಶೋಧರ ಚರಿತ್ರೆಯಲ್ಲಿ ಬರುವ ‘ ಠಕ್ಕುಗೊಂಡಂತಿರ್ದಂ ’ ಎಂಬಲ್ಲಿಯ ‘ ಠಕ್ಕು’ ಎಂಬ ಮಾತುಗಳ ಮೇಲೆ ಉಚಿತವಾದ ವ್ಯಾಖ್ಯಾನ ಮಾಡಿದ್ದೂ ಉಂಟು.

ಒಟ್ಟಿನಲ್ಲಿ ಶ್ರೀಯವರು ಅನೇಕ ಭಾಷೆಗಳಲ್ಲಿ ವಿದ್ವಾಂಸರಾಗಿ, ಇಂಗ್ಲಿಷ್-ಕನ್ನಡ ಭಾಷೆಗಳಲ್ಲಿ ಅನನ್ಯಸಾಧಾರಣ ವಾಗ್ಮಿಗಳಾಗಿ, ಕನ್ನಡವೇ ತಮ್ಮ ಜೀವಿತದ ಧ್ಯೇಯವಾಗಿ ದುಡಿದರು. ಹರಿಹಂಚಾದ ಕನ್ನಡ ನಾಡಿನ ಏಕೀಕರಣಕ್ಕಾಗಿ ನಾಡನ್ನೆಲ್ಲ ಸುತ್ತಿ, ಕರ್ಣಾಟಕ ಸಂಘಗಳನ್ನು ಸ್ಥಾಪಿಸಿ ಜನರಲ್ಲಿ ಭಾವೈಕ್ಯವನ್ನು ಮೂಡಿಸಿದರು. ಲಿಪಿ ಸುಧಾರಣೆಯಲ್ಲಿ ಆಸಕ್ತಿ ವಹಿಸಿದರು. ತರುಣ ಲೇಖಕರಿಗೆ, ಕವಿಗಳಿಗೆ ಪ್ರೋತ್ಸಾಹ ಕೊಟ್ಟರು. ನನ್ನ ಅನುಭವವೊಂದನ್ನು ಹೇಳಬಹುದಾದರೆ ವಿದ್ಯಾರ್ಥಿಗಳಾದ ನಾವು ಕಟ್ಟಿಕೊಂಡಿದ್ದ ‘ ತರುಣರ ದಂಡು ’ ಎಂಬ ಸಂಘದ ವಾರ್ಷಿಕೋತ್ಸವ (೧೯೩೭)ದ ಸಂದರ್ಭದಲ್ಲಿ ಛಾಯಾಚಿತ್ರವನ್ನು ತೆಗೆಯುವಾಗ ‘ ನೀವು ತರುಣರು ; ಕುಳಿತುಕೊಳ್ಳಬೇಕಾದವರು. ನಿಮಗೆ ಬೆಂಬಲವಾಗಿ ನಿಮ್ಮ ಹಿಂದೆ ನಾವು ನಿಂತಿರುತ್ತೇವೆ ’ ಎಂದು ಹೇಳಿ, ನಮ್ಮನ್ನು ಕುರ್ಚಿಯಲ್ಲಿ ಕೂರಿಸಿ, ತಾವು ನಮ್ಮ ಹಿಂದೆ ನಿಂತರು. ಅವರು ಬದುಕಿನಲ್ಲಿ ಇಂಥ ಸಂದರ್ಭಗಳು ಎಷ್ಟೋ ! ಶ್ರೀಯವರ ಒಂದು ಜೀವಮಾನಕಾಲದ ಸಾಧನೆ ಸಿದ್ಧಿಗಳನ್ನು ಒಂದು ಚಿಕ್ಕ ಪ್ರಬಂಧದಲ್ಲಿ ಅಡಕಮಾಡುವುದು ಕಷ್ಟ. ಅವರ ಹೆಸರೇ ಇಂದಿಗೂ ಕನ್ನಡ ಕಾರ್ಯಗಳಿಗೆ, ಕಾರ್ಯಕರ್ತರಿಗೆ ಶ್ರೀರಕ್ಷೆ.

ಶ್ರೀಯವರು ಬದುಕಿದ್ದಾಗ ಅವರಿಗೆ ಅನೇಕ ಗೌರವಗಳು ಸಂದವು. ೧೯೨೮ರಲ್ಲಿ ಮೈಸೂರಿನ ಮಹಾರಾಜಾ ಕಾಲೇಜಿನ ವಿದ್ಯಾರ್ಥಿಗಳು ‘ ಕಿರಿಯ ಕಾಣಿಕೆ ’ ಎಂಬ ಕವನ ಸಂಗ್ರಹವನ್ನು ಅರ್ಪಿಸಿದರು. ಅಂದು ತಮ್ಮ ಬದುಕು ಧನ್ಯವಾಯಿತೆಂದು ಶ್ರೀಯವರು ಉದ್ಗಾರ ತೆಗೆದರಂತೆ ! ಅದೇ ವರ್ಷ ಅವರು ಸಮ್ಮೇಳನಾಧ್ಯಕ್ಷರಾದರು. ೧೯೩೮ ರಿಂದ ೧೯೪೨ರ ವರೆಗೆ ಪರಿಷತ್ತಿನ ಉಪಾಧ್ಯಕ್ಷರಾಗಿದ್ದರು. ೧೯೩೮ರಲ್ಲಿ ಅವರಿಗೆ ಮೈಸೂರು ಮಹಾರಾಜರಿಂದ ‘ ರಾಜಸೇವಾಸಕ್ತ’ ಎಂಬ ಬಿರುದು ದೊರಕಿತು.

* * *

ಶ್ರೀಯವರು ಪ್ರಸಿದ್ಧವಾದ ತಮ್ಮ ಕವನವೊಂದರಲ್ಲಿ ‘ ನಿನ್ನ ನಾಡೊಂದಾಗಿ, ನಿನ್ನ ನುಡಿ ಮೇಲಾಗಿ . . . ಬಾಳರೇ . . . ನೀ ಬಂದು ಹರಸಿದಡೆ’ ಎಂದು ಕನ್ನಡ ಭುವನೇಶ್ವರಿಯನ್ನು ಪ್ರಾರ್ಥಿಸಿದ್ದರು. ಕೆಲವು ಭಾಗಗಳನ್ನುಳಿದು ಕನ್ನಡ ನಾಡೇನೋ ಒಂದಾಯಿತು, ನುಡಿ

[೧೮ನೇ ಪುಟ ನೋಡಿ]

# ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು

✳ ಎ. ಆರ್. ಕೃಷ್ಣಶಾಸ್ತ್ರೀ

ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ ಎಂ.ಎ., ಬಿ.ಎಲ್. ಅವರು ಕಳೆದ ತಿಂಗಳು, ಇಂಗ್ಲಿಷ್ ಪ್ರೊಫೆಸರ್ ಮತ್ತು ಕನ್ನಡದ ಗೌರವ ಪ್ರೊಫೆಸರ್ ಈ ಅಧಿಕಾರಗಳಿಂದ ನಿವೃತ್ತರಾದರು..........

........ಶ್ರೀಮಾನ್ ಶ್ರೀಕಂಠಯ್ಯನವರು ಇಂಗ್ಲಿಷ್ ಪ್ರೊಫೆಸರಾಗಿ ಪ್ರಸಿದ್ಧರಾದರು. ಆದರೆ ಅವರು ವಿಶ್ರಾಂತಿ ಪಡೆಯುವಾಗಲೂ ಜೊತೆಗೆ ಕನ್ನಡದ ಗೌರವ ಪ್ರೊಫೆಸರ್ ಆಗಿದ್ದರೆಂದೂ ಕನ್ನಡದ ಪ್ರೌಢ ತರಗತಿಗಳಿಗೆ ಉಪನ್ಯಾಸ ಮಾಡುತ್ತಿದ್ದರೆಂದೂ ಅನೇಕರಿಗೆ ತಿಳಿಯದು. ಅದಕ್ಕಿಂತ ಹೆಚ್ಚಾಗಿ, ಅವರು ಉದ್ಯೋಗಕ್ಕೆ ಸೇರಿದಾಗಲೆ ಕಾಲೇಜು ತರಗತಿಗಳಲ್ಲಿ ಎಷ್ಟು ಇಂಗ್ಲಿಷ್ ಪಾಠ ಹೇಳುತ್ತಿದ್ದರೋ ಅಷ್ಟು ಕನ್ನಡವನ್ನೂ-ಇಂಟರ್ ಮೀಡಿಯೆಟ್ ತರಗತಿಗೆ, ಬಿ.ಎ. ತರಗತಿಗೆ ಪಾಠ ಹೇಳುತ್ತಿದ್ದರೆಂದು ತಿಳಿಯದು. ಅವರ ಬೋಧನ ಕ್ರಮದಲ್ಲಿ ಇಂಗ್ಲಿಷ್ ತರಗತಿಗಳಿಗೆ ಕನ್ನಡದ ಉಪಯೋಗವೂ ಕನ್ನಡ ತರಗತಿಗೆ ಇಂಗ್ಲಿಷಿನ ಉಪಯೋಗವೂ ಆಗುತ್ತಿತ್ತು. ಇಂಗ್ಲಿಷ್ ಪಾಠದಲ್ಲಿ ಒಂದು ರಸವತ್ತಾದ ಅಥವಾ ಮಹತ್ತಿನ ಸಂಗತಿ ಬಂದರೆ ಅದನ್ನು ಕನ್ನಡದಲ್ಲಿ ತರುವುದು ಹೇಗೆ ಎಂದು ಮೊದಲು ಯೋಚನೆ ಹೊರಡುತ್ತಿತ್ತು. ಸಾಹಿತ್ಯವನ್ನು ಐತಿಹಾಸಿಕ ದೃಷ್ಟಿಯಿಂದಲೂ ತುಲನಾತ್ಮಕ ದೃಷ್ಟಿಯಿಂದಲೂ ಓದಿದರೇ ನಿಜವಾದ ಬೆಲೆಕಟ್ಟುವ ವಿಮರ್ಶಾ ಬುದ್ಧಿ ಬರುವುದೆಂಬುದನ್ನು ಅವರು ತೋರಿಸಿಕೊಟ್ಟರು. ವ್ಯಾಸಂಗ ಮಾಡಿದ್ದನ್ನು ಜೀರ್ಣಿಸಿಕೊಂಡು ಉಪಯೋಗಿಸಿಕೊಳ್ಳುವುದನ್ನು ಹೇಳಿಕೊಟ್ಟವರು ಅವರು. ನಿಮ್ಮ ಓದು ಮನೆಯ ಕಿಟಕಿಗಳನ್ನು ತೆರೆಯಿರಿ, ಎಲ್ಲೆಲ್ಲಿಂದ ಬೆಳಕು ಬಂದರೂ ಅದನ್ನು ಬರಮಾಡಿಕೊಳ್ಳಿ, ಸೂರ್ಯನನ್ನು ಎಲ್ಲೆಲ್ಲಿ ಕಂಡರೆ ಅಲ್ಲಲ್ಲಿ ಕೈ ಮುಗಿಯಿರಿ ಎಂದು ಸಂಸ್ಕೃತಿ ಪ್ರಪಂಚದಲ್ಲಿ, ಒಂದು ವಿಶ್ವವಿಶಾಲ ಭಾವನೆಯನ್ನು ಬೆಳೆಸಿದರು ಅವರು; ಹೀಗೆ ಪಾಶ್ಚಾತ್ಯ ಸಾಹಿತ್ಯವೆಂದರೆ ಬರಿಯ ಇಂಗ್ಲಿಷ್ ಸಾಹಿತ್ಯವಲ್ಲ, ಅವೆಲ್ಲಕ್ಕೂ ಮೂಲವಾದ, ಮೇಲಾದ, ಗ್ರೀಕ್ ಸಾಹಿತ್ಯವಿದೆ ಎಂದು ಅದನ್ನು ಶಿಕ್ಷಣ ಕ್ಷೇತ್ರಕ್ಕೆ, ಸೃಷ್ಟಿ ಕ್ಷೇತ್ರಕ್ಕೆ ತಂದವರು ಅವರು. ಈ ಕೆಲಸವನ್ನು ಅವರು 'ಅಶ್ವತ್ಥಾಮನ್', 'ಪಾರಸಿಕರು'ಗಳನ್ನು ಬರೆದು ಮಾಡಿದ್ದಕ್ಕಿಂತ ಹೆಚ್ಚಾಗಿ ಪಾಠ ಹೇಳಿ ಮಾಡಿದರು. ಕನ್ನಡದ ಕಡೆಯಲ್ಲಿಯೂ ಹೀಗೆಯೇ ತಮಿಳಿನ ಪ್ರಾಶಸ್ತ್ಯವನ್ನು ತೋರಿಸಿದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ನಮಗೆ ತಿಳಿದ ಮಟ್ಟಿಗೆ, ಗ್ರೀಕ್ ಸಾಹಿತ್ಯ, ತಮಿಳು ಸಾಹಿತ್ಯಗಳ ಪ್ರಚಾರ ಮಾಡಿದವರು ಅವರಂಥವರು ಇನ್ನೊಬ್ಬರಿಲ್ಲ.

ಅವರು ಬಹುದಿವಸದಿಂದ ಮಹಾರಾಜಾ ಕಾಲೇಜಿನ ಕರ್ಣಾಟಕ ಸಂಘದ ಮತ್ತು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಅಧ್ಯಕ್ಷರಾಗಿ, ಪ್ರಬುದ್ಧ ಕರ್ಣಾಟಕ ಸಂಪಾದಕ ಮಂಡಲಿಯ ಮತ್ತು ಕನ್ನಡ ಗ್ರಂಥ ಪ್ರಕಾಶನ ಸಮಿತಿಯ ಅಧ್ಯಕ್ಷರಾಗಿ ಅವುಗಳಿಗೆ ದುಡಿದಿದ್ದಾರೆ. ಅವರು ತಮ್ಮ ಸರ್ಕಾರೀ ಉದ್ಯೋಗದಿದ ನಿವೃತ್ತರಾಗಿ ಇವುಗಳಿಂದ ಕಳಚಿಕೊಂಡರೂ ಅವರ ಆದರ ಸ್ನೇಹ ವಿಶ್ವಾಸಗಳು ಏನೂ ಕಡಿಮೆಯಾಗಿಲ್ಲ; ಅವು ಕನ್ನಡಕ್ಕೆ ಪರಿಷತ್ತಿನ ಮೂಲಕ ಇಮ್ಮಡಿಯಾದುವು, ಮೀಸಲಾದುವು........

('ಭಾಷಣಗಳು ಮತ್ತು ಲೇಖನಗಳು' ಕೃತಿಯಿಂದ)



# ಬಿ. ಎಂ. ಶ್ರೀಯವರ ಸ್ವಭಾವ

* ಎ. ಎನ್. ಮೂರ್ತಿರಾವ್




ಸುಮಾರು ೧೯೧೬ರಲ್ಲಿ ಇಬ್ಬರು ಹೈಸ್ಕೂಲು ವಿದ್ಯಾರ್ಥಿಗಳು ಅವರ ಶಾಲೆಯ ಚರ್ಚಾಕೂಟದ (Debating Society) ಜಂಟಿ ಕಾರ್ಯದರ್ಶಿಗಳು—ಪ್ರಾ|| ಬಿ. ಎಂ. ಶ್ರೀಕಂಠಯ್ಯ ಅವರನ್ನು ಭೇಟಿ ಮಾಡಲೆಂದು ಅವರ ಮನೆಗೆ ಹೋದರು. ಆ ಇಬ್ಬರಲ್ಲಿ ನಾನೂ ಒಬ್ಬ. 'ಪ್ರಾಚೀನ ಭಾರತ ಆಧುನಿಕ ಭಾರತಕ್ಕಿಂತ ಉತ್ತಮವಾಗಿತ್ತು' ಎಂಬ ವಿಷಯದ ಮೇಲೆ ಚರ್ಚೆ ನಡೆಯತಕ್ಕದ್ದೆಂದು ನಾವು ಏರ್ಪಾಟು ಮಾಡಿದ್ದೆವು. ಬಹಳ ಸೊಗಸಾದ ವಿಷಯವನ್ನು ಆರಿಸಿದ್ದೇವೆ ಎಂದು ನಮಗೆ ಹೆಮ್ಮೆ. ಆ ಚರ್ಚೆಗೆ ಪ್ರಸಿದ್ಧ ಪ್ರೊಫೆಸರಾದ ಬಿ. ಎಂ. ಶ್ರೀಕಂಠಯ್ಯನವರನ್ನು 'ಸ್ಪೀಕರ್' ಆಗಿ ಕರೆತಂದರೆ ಎಲ್ಲರಿಂದಲೂ ಭೇಷ್ ಎನ್ನಿಸಿಕೊಳ್ಳಬಹುದು ಎಂದುಕೊಂಡು ನಾವು ಅವರನ್ನು ಕಾಣಲು ಹೋದೆವು. ಮನೆಯಲ್ಲಿದ್ದವರು ಯಾರೋ "ಆ ಕೊಠಡಿಯಲ್ಲಿದ್ದಾರೆ, ಹೋಗಿ" ಎಂದರು. ಶ್ರೀಕಂಠಯ್ಯನವರು ತಾವು ಓದುತ್ತಿದ್ದ ಪುಸ್ತಕವನ್ನು ಮೇಜಿನ ಮೇಲಿಟ್ಟು ನಮ್ಮ ಕಡೆಗೆ ತಿರುಗಿ "Well"? ಎಂದರು; ದನಿಯಲ್ಲಿ ಮಾರ್ದವವೇನೂ ಇರಲಿಲ್ಲ. ನಾವು ಬಂದದ್ದು ಅವರಿಗೆ ಹಿತವಾಗಲಿಲ್ಲ ಎಂಬ ಭಾವನೆಯಿಂದಾಗಿ ಮೊದಲೇ ಮುಖೇಡಿಗಳಾಗಿದ್ದ ನಮಗೆ ಬಾಯಿಕಟ್ಟಿ ಹೋಯಿತು. ಮಾತಾಡದೆ ಪೆಚ್ಚಾಗಿ ಅವರನ್ನು ನೋಡುತ್ತ ನಿಂತೆವು. ಅವರಿಗೆ ಆಗ, "ಪಾಪ, ಅರಿಯದ ಹುಡುಗರು" ಎನ್ನಿಸಿತೇನೊ, "ನನ್ನಿಂದ ಏನಾಗಬೇಕು ಹೇಳಿ" (yes, what can I do for you?) ಎಂದರು. ಆಗಿನ ಪದ್ಧತಿಯಂತೆ ನಮ್ಮ ಸಂಭಾಷಣೆಯೆಲ್ಲ ಇಂಗ್ಲಿಷಿನಲ್ಲೇ ಸಾಗಿತು. ನಾವು ಸ್ವಲ್ಪ ಧೈರ್ಯಗೊಂಡು ಬಂದ ಉದ್ದೇಶವನ್ನು ತಿಳಿಸಿದೆವು. ಚರ್ಚೆಗೆ ನಾವು ಆರಿಸಿದ್ದ ವಿಷಯ ಕಿವಿಗೆ ಬಿದ್ದಾಗ ಅವರ ಮುಖದ ಮೇಲೆ ಒಂದು ಬಗೆಯ ನಗೆ-ಅದನ್ನು ಹುಳಿನಗೆ ಎನ್ನಬಹುದೇನೋ-ಸುಳಿದು ಹೋಯಿತು. "ಹೂಂ. ಪ್ರಾಚೀನ ಭಾರತ ಆಧುನಿಕ ಭಾರತಕ್ಕಿಂತ ಉತ್ತಮ! ಭಾರತೀಯವಾದದ್ದು ಏನೇ ಇರಲಿ, ಉಳಿದುದೆಲ್ಲಕ್ಕಿಂತಲೂ ಅದು ಉತ್ತಮ! ಸ್ವತಸ್ಸಿದ್ಧವಾದ ಮಾತು, ಅಲ್ಲವೇ? (Hmm, Ancient India is better than Modern India! all things Indian are

better than all other things modern! A Self-evident proposition, isn't it?) ಎಂದರು. ನಮಗೆ Self-evident proposition ಎಂದರೇನೋ ತಿಳಿಯದು. ಅವರು ಹೇಳಿದ್ದು ಮೆಚ್ಚಿಕೆಯ ಮಾತಲ್ಲ ಎಂದಷ್ಟು ಮಾತ್ರ ಗೊತ್ತಾಯಿತು; ನಮ್ಮ ಹುಮ್ಮಸ್ಸೆಲ್ಲಾ ಇಳಿದು ಹೋಯಿತು. ನಮ್ಮ ಪೆಚ್ಚು ಮೋರೆಯನ್ನು ನೋಡಿ ಅವರ ಮನಸ್ಸು ಕರಗಿತೆಂದು ತೋರುತ್ತದೆ. ನಮ್ಮನ್ನು ಕುಳಿತುಕೊಳ್ಳ ಹೇಳಿ, ಮೃದುವಾದ ದನಿಯಲ್ಲಿ ನಾಲ್ಕು ಮಾತಾಡಿ, ಆ ದಿನ ತಮಗೆ ಬೇರೆ ಕೆಲಸವಿರುವುದರಿಂದ ಬರಲಾಗುವುದಿಲ್ಲ ಎಂದು ಹೇಳಿದ್ದಲ್ಲದೆ "I am Sorry" ಎಂಬ ಮಾತನ್ನು ಸೇರಿಸಿ ನಮ್ಮನ್ನು ಕಳುಹಿಸಿಕೊಟ್ಟರು.

ನಮ್ಮ ಬೇಡಿಕೆಗೆ ಶ್ರೀಯವರಿಂದ ಬಂದ ಪ್ರತಿಕ್ರಿಯೆ ಈ ಶತಮಾನದ ಎರಡನೆಯ ದಶಕದಲ್ಲಿ ಅವರ ಸ್ವಭಾವ ಹೇಗಿತ್ತು ಎಂಬುದನ್ನು ಸೂಚಿಸುತ್ತದೆ. ಅದಕ್ಕಾಗಿಯೇ ಇಲ್ಲಿ ಅದರ ಪ್ರಸ್ತಾಪ ಮಾಡಿದ್ದೇನೆ. 'ಶ್ರೀಕಂಠಯ್ಯನವರು ಮನುಷ್ಯರು ಮುಟ್ಟಿದ ಗುಬ್ಬಿ' ಎಂದು ಆಗ ಜನ ಹೇಳುತ್ತಿದ್ದದ್ದು ನೆನಪಿದೆ. ಅವರ ಸ್ವಭಾವದಲ್ಲಿ ಮೊದಲು ಕಾಣುತ್ತಿದ್ದದ್ದು ಒಂದು ತರದ ಬಿಗಿ; ಅದರಲ್ಲಿ ಹಿಡಿತ ಹೆಚ್ಚು, ಸಲಿಗೆ ಕಡಿಮೆ. ಆದರೆ ಬೇಗ ಆ ಬಿಗಿ ಸಡಿಲವಾಗಿ ಸೌಜನ್ಯ ಸಹಾನುಭೂತಿಗಳಿಗೆ ಎಡೆಮಾಡಿಕೊಡುತ್ತಿತ್ತು. ಮೇಲೆ ಕಾಣಿಸಿರುವ ಪ್ರಸಂಗ ಶ್ರೀಯವರಲ್ಲಿ ಎದ್ದು ಕಾಣು ತ್ತಿದ್ದ ಮತ್ತೊಂದು ಗುಣಕ್ಕೂ ಸೂಚಕ. ವಿಚಾರಪರರಲ್ಲ ದವರು, ಹಳಸಲು ಮಾತು (Platituds) ಗಳನ್ನು ಮತ್ತೆ ಮತ್ತೆ ಬಳಸುವವರು ಭಾವೋದ್ರೇಕದಿಂದ ಮಾತಾಡು ವವರು—ಇಂಥವರ ವಿಷಯದಲ್ಲಿ ಅವರಿಗೆ ಅಸಹನೆ; ಒಂದೊಂದು ವೇಳೆ ತಿರಸ್ಕಾರ ಎಂದರೂ ತಡೆಯುತ್ತಿತ್ತು. ದೇಶ, ಭಾಷೆ, ಸಾಹಿತ್ಯ ಯಾವುದರ ವಿಷಯದಲ್ಲಾಗಲಿ ಅಂಧ ಶ್ರದ್ಧೆ ಅವರಿಗೆ ಹಿಡಿಸದು; ಏಕೆಂದರೆ "ಕೊನೆಗೆ ನಿಲ್ಲುವುದು ಅಭಿಮಾನವಲ್ಲ, ಸತ್ಯ". ದೇಶಾಭಿಮಾನ ಎಂಬ ದೊಡ್ಡ ಪದವನ್ನು ಬಳಸಿಕೊಂಡು ಮೋಹಕ್ಕೆ ತುತ್ತಾಗಬಾರದು, ಅಸತ್ಯವನ್ನು ಅಪ್ಪಿಕೊಳ್ಳಬಾರದು. ಯಾವ ಅಭಿಪ್ರಾಯವಾಗಲಿ, ಅದು ಮನಸ್ಸಿಗೆ ಎಷ್ಟೇ ಹಿತವಾಗಿರಲಿ, "ಇದು ನಿಜವೆ?" ಎಂದು ಪರೀಕ್ಷಿಸದೆ ಒಪ್ಪಬಾರದು. ಭಾರತ ನಮ್ಮ ದೇಶ, ನಮಗೆ ಪ್ರಿಯವಾದ ದೇಶ. ಆದರೆ ಪ್ರಾಚೀನ ಭಾರತವಾಗಲಿ ಇಂದಿನ ಭಾರತ ವಾಗಲಿ, ಅದನ್ನು ಪೊರೆ ಕಳೆದ ಕಣ್ಣಿನಿಂದ ನೋಡಬೇಕು. ಇದು ಅವರ ಸ್ವಭಾವ.

---

[೧೫ನೇ ಪುಟದಿಂದ]

ಮೇಲಾಗುವ ಲಕ್ಷಣಗಳು ಕಾಣುತ್ತಿವೆ. ಇದನ್ನು ಆಗ ಮಾಡಿಸುವ ಕೆಲಸ ಕನ್ನಡಿಗರ ಮೇಲೆ ಬಿದ್ದಿರುವ ಕರ್ತವ್ಯವಾಗಿದೆ. ಕನ್ನಡಿಗರು 'ಭಾರತದ, ಲೋಕದಾ ಮಕ್ಕಳಲಿ ಹಿರಿದಾಗಿ ತೂಕ ತೂಗುವಿರಾ?' ಎಂದು ಅವರು ಕೇಳಿರುವ ಪ್ರಶ್ನೆಗೆ ನಾವು ಉತ್ತರಿಸಬೇಕಾಗಿದೆ. ಕನ್ನಡ ನಾಡಿನ ಸಂಸತ್ ಸದಸ್ಯರೂ ಇತರ ಕನ್ನಡಿಗರೂ ಅಹಿಂಸಾತ್ಮಕ ರೀತಿಯಲ್ಲಿ ಧೀರ ಗಂಭೀರ ನಡತೆಯಿಂದ, ಒಗ್ಗಟ್ಟಿನಿಂದ ಹೋರಾಡಿ ಕನ್ನಡಿಗರ ಆಸೆ ಆಕಾಂಕ್ಷೆಗಳನ್ನು ಪೂರೈಸಿ ದಾಗಲೇ ಶ್ರೀಯವರ ಆತ್ಮಕ್ಕೆ ತೃಪ್ತಿ; ಅವರ ಜನ್ಮ ಶತಮಾನೋತ್ಸವದ ಆಚರಣೆ ಸಾರ್ಥಕ.

---

'ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂನಾಸ್ತಿ.'
ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ.






# ಕನ್ನಡ ನುಡಿಯ ಹರಿದಾಸ 'ಶ್ರೀ'

* ಗೊರೂರು ರಾಮಸ್ವಾಮಿ ಅಯ್ಯಂಗಾರ್

ದಿವಂಗತ, ಕೀರ್ತಿವಂತ ಬೆಳ್ಳೂರು ಮೈಲಾರ ಶ್ರೀಕಂಠಯ್ಯನವರು ಕನ್ನಡ ಸಾಹಿತ್ಯದಲ್ಲಿ ನವೀನ ಪುನರುಜ್ಜೀವನವನ್ನು ಕನಸು ಕಂಡು ಕಾರ್ಯಕಾರಿಗೊಳಿಸಿ ಉಜ್ಜೀವಿಸಿ ಪ್ರೋತ್ಸಾಹಿಸಿದ ಮೊದಲಿಗರಲ್ಲಿ ಅಗ್ರಗಣ್ಯರು. ಅವರು ಸರ್ವವಿಧದಿಂದಲೂ ಕನ್ನಡದ ಮತ್ತು ಕನ್ನಡ ನಾಡಿನ ಶ್ರೀಯೇ ಆಗಿ ಬೆಳಗಿ, ಭೌತ ದೇಹದಿಂದ ಕಣ್ಮರೆಯಾದರೂ ಪ್ರಭಾವ ಮತ್ತು ಸಂದೇಶದಿಂದ ಕನ್ನಡ ನುಡಿಯ ಮತ್ತು ನಾಡಿನ ಮುನ್ನಡೆಗೆ ಮಾರ್ಗವನ್ನು ತೋರಿಸುವ ನಂದಾ ದೀಪವೇ ಆಗಿದ್ದಾರೆ.

ಶ್ರೀಮಾನ್ ಬಿ. ಎಂ. ಶ್ರೀಯವರು ಕನ್ನಡಕ್ಕಾಗಿ ಮಾಡಿದ ಕಾರ್ಯವನ್ನು ಇಂದು ಅವರನ್ನು ಕಾಣದಿದ್ದವರು— ಊಹಿಸಿ ಮಾತ್ರ ತಿಳಿಯಬಹುದಾಗಿದೆ. ಶ್ರೀಯವರು ಈಗ ಸುಮಾರು ನಲವತ್ತು ವರ್ಷಗಳ ಹಿಂದೆಯೇ ಆ ಕಾರ್ಯವನ್ನು ಪ್ರಾರಂಭಿಸಿದರು. ಅದು ಕನ್ನಡಕ್ಕೂ ದೇಶ ಭಾಷೆಗಳಿಗೂ, ಇಂಗ್ಲಿಷ್ ಭಾಷೆಯ ಸಾರ್ವಭೌಮತ್ವ, ಇಂಗ್ಲಿಷರ ಜಗತ್ತನ್ನೇ ಆವರಿಸಿರುವ ಚಕ್ರಾಧಿಪತ್ಯ, ಪಾರತಂತ್ರ್ಯದಲ್ಲಿರುವವರಿಗೆ ಸ್ವಾಭಾವಿಕವಾಗಿರುವ "ಆಳುವವರ ಭಾಷೆ ಹೆಚ್ಚು, ನಮ್ಮದು ಕೀಳು" ಎಂದು ಸ್ವಭಾಷಾ ಪ್ರೇಮ ರಹಿತ ನೈಚ್ಯಭಾವನೆ ಇವು ಅರಮನೆ ಗುರುಮನೆಗಳನ್ನೆಲ್ಲ ವ್ಯಾಪಿಸಿದ್ದ ಕಾಲ ಅದು........ ಒಂದು ದೃಷ್ಟಿಯಿಂದ ಬಿ. ಎಂ. ಶ್ರೀ ಯವರು ಕೆಲಸ ಪ್ರಾರಂಭ ಮಾಡಿದ ಕಾಲದ ಕನ್ನಡದ ಸ್ವರ್ಣಯುಗದ ಆರಂಭವೆನ್ನಬಹುದು ; ಕನ್ನಡದ ಸ್ಥಿತಿಯಲ್ಲಿ ಅತಿ ಅಂಧಕಾರದ ನಂತರ, ತೋರಿದ ಉದಯವೇ ಅದು. ವಿಶ್ವವಿದ್ಯಾನಿಲಯದಲ್ಲಿ ಸಹ ಇನ್ನೂ ಕನ್ನಡಕ್ಕೆ ಒಂದು ಪ್ರೊಫೆಸರ್ ಸ್ಥಾನ ದೊರಕಿರಲಿಲ್ಲ. ಬರಿಯ ಪಂಡಿತರೇ ಸಾಕು ಎಂಬುದು ಸರ್ಕಾರದ ಉದ್ದೇಶವೂ ಆಗಿತ್ತು. ಪ್ರೊಫೆಸರರನ್ನು ಹೊಂದಲು ಕನ್ನಡಕ್ಕೆ ಯೋಗ್ಯತೆ ಸಾಲದು ; ಅಷ್ಟು ವೆಚ್ಚ ಮಾಡುವುದು ನ್ಯಾಯವಲ್ಲ ಎಂಬುದು ಸರ್ಕಾರದ ವಾದವಾಗಿತ್ತು. ಸರ್ಕಾರ ಪ್ರೊಫೆಸರರನ್ನೇ ಕೊಡದೆ ಇನ್ನೂ ಎಷ್ಟು ವರ್ಷ ತಳ್ಳುತ್ತಿತ್ತೊ. ಆಗ ಶ್ರೀಯವರು ಕನ್ನಡಕ್ಕೆ ಹೇಗಾದರೂ ಪ್ರೊಫೆಸರ್‌ರ ಸ್ಥಾನ ದೊರಕಲಿ ಎಂದು ಇಂಗ್ಲಿಷ್ ಪ್ರೊಫೆಸರರಾದ ತಾವೇ ಕನ್ನಡಕ್ಕೂ ಗೌರವಾನ್ವಿತ ಪ್ರೊಫೆಸರ್ ಆಗಲು ಸಮ್ಮತಿಸಿ ಪಾಠಗಳನ್ನೂ ಹೇಳತೊಡಗಿದರು. ಅಂತೂ ವಿಶ್ವವಿದ್ಯಾನಿಲಯದಲ್ಲಿ ಅನುಸರಿಸಬೇಕಾದ ಪಾಠಕ್ರಮ ಪಟ್ಟಿ ಮುಂತಾದುವನ್ನೆಲ್ಲ ಅವರು ಪರಿಷ್ಕರಿಸಿ ಅನೇಕ ವಿದ್ಯಾರ್ಥಿಗಳನ್ನೂ ಕನ್ನಡಕ್ಕೆ ಆಕರ್ಷಿಸಿ

ದರು. ಹೀಗೆ ವಿಶ್ವವಿದ್ಯಾನಿಲಯದ ಪ್ರೌಢ ತರಗತಿಗಳ ಉಪಯೋಗಕ್ಕಾಗಿಯೇ ಅವರು ಕನ್ನಡ ಕೈಪಿಡಿ, ಕನ್ನಡ ಸಾಹಿತ್ಯ ಚರಿತ್ರೆ ಗ್ರಂಥಮಾಲೆ, ಹೊಸ ಹೊಸ ಗ್ರಂಥ ರಚನೆಗೆ ಪ್ರೋತ್ಸಾಹ ಈ ಎಲ್ಲ ಕಾರ್ಯಕ್ರಮಗಳನ್ನು ಕೈಗೊಂಡರು. ಒಟ್ಟಿನಲ್ಲಿ ಒಂದೇ ಮಾತಿನಲ್ಲಿ ಹೇಳುವುದಾದರೆ, ಇಂದಿನ ಬಗೆಯ ಕನ್ನಡದ ಬೆಳವಣಿಗೆಯ ಮೂಲವನ್ನು ಶ್ರೀಯವರ ಪ್ರಾರಂಭ ಪ್ರಯತ್ನಗಳಲ್ಲಿ ಗುರುತಿಸಬಹುದು.

ಇವುಗಳೆಲ್ಲವುಗಳಿಗಿಂತ ಶ್ರೀಯವರು ಮಾಡಿದ ಹೆಚ್ಚಾದ ಕಾರ್ಯವೆಂದರೆ ಕನ್ನಡಕ್ಕಾಗಿ; ಕನ್ನಡ ವಾತಾವರಣಕ್ಕಾಗಿ ಜನಜೀವನದಲ್ಲಿ ಕನ್ನಡವನ್ನು ಅವರ ಉಸಿರು, ಕಣ್ಣು ಜೀವನದ ಅವಶ್ಯಕತೆಗಾಗಿ ಉಪಯೋಗಿಸುವಂತೆ ಜನರನ್ನೂ ಪ್ರೇರೇಪಿಸುವುದಕ್ಕಾಗಿ ಮಾಡಿದ ಕಾರ್ಯ. ಮುಖ್ಯವಾಗಿ ಕನ್ನಡ ಜನರೆಲ್ಲಾ ಒಂದು, ಕನ್ನಡ ಕುಲವೆಲ್ಲಾ ಒಂದು; ಕನ್ನಡಿಗರು ಎಲ್ಲಿದ್ದರೂ (ಆಗ ಕನ್ನಡಿಗರು ಬೊಂಬಾಯಿ, ಮದರಾಸು, ಕೊಡಗು ಮತ್ತು ಇತರ ನಾನಾ ಭಾಗಗಳಲ್ಲಿದ್ದರು) ಒಂದು ಕುಟುಂಬಕ್ಕೆ ಸೇರಿದವರು ಎಂಬ ಭಾವನೆಯನ್ನು ಶ್ರೀ ಯ ವ ರು ಕರ್ನಾಟಕದಲ್ಲೆಲ್ಲಾ ಸಂಚರಿಸಿ ಕರ್ನಾಟಕ ವೈಭವವನ್ನೂ ಮಹಿಮೆಯನ್ನೂ ಇಲ್ಲಿಯ ಧೀರರು ವೀರರು, ಕಾವ್ಯ, ಶಿಲ್ಪ, ಸಂಗೀತ, ನೃತ್ಯ, ವಾಸ್ತುಶಿಲ್ಪ, ಹರಿದಾಸರು, ಶಿವಶರಣರು, ದೇವಾಲಯಗಳು, ತೀರ್ಥಗಳು—ಇವುಗಳನ್ನೆಲ್ಲ ಕುರಿತು 'ಗಂಟೆ'ಗಟ್ಟಲೆ ಲೀಲಾಜಾಲವಾಗಿ ಅತ್ಯಂತ ಮಧುರವಾದ ರೀತಿಯಲ್ಲಿ ಉಪನ್ಯಾಸಮಾಡಿ ಜನಗಳಲ್ಲಿ ಕನ್ನಡ ಪ್ರೇಮ ಚಳವಳಿಯನ್ನು ಏಳಿಸಿದರು....

ಹೀಗೆ ಕನ್ನಡದ ಏಳಿಗೆಗೆ ಅನುಕೂಲ ವಾತಾವರಣವನ್ನೂ ಕಲ್ಪಿಸುವುದರಲ್ಲಿ ತಮ್ಮ ಕಾಲ ಶಕ್ತಿ ಹಣಗಳ ಬಹುಭಾಗವನ್ನು ಶ್ರೀಯವರು ವಿನಿಯೋಗಿಸಬೇಕಾದರೂ ಅವರು ಸೃಷ್ಟಿಸಿದ ಕಾವ್ಯಗಳು, ನಾಟಕಗಳು ಅವಿರತ ಪರಿಶ್ರಮದ ಮಧ್ಯದಲ್ಲಿಯೂ ಅವರ ಕಾವ್ಯ ಪ್ರತಿಭೆ ಹೇಗೆ ಜಾಗೃತವಾಗಿದ್ದಿತೆಂಬುದನ್ನು ತೋರಿಸುತ್ತದೆ.... ಶ್ರೀಯವರು ಕನ್ನಡ ಮಾತಿಗೆ ಒಂದು ತೇಜಸ್ಸನ್ನು ಓಜಸ್ಸನ್ನು ಕೊಟ್ಟರು. ಅವರ ಕನ್ನಡ ಗದ್ಯಶೈಲಿ ತುಂಬ ಪ್ರಭಾವಶಾಲೀ ಮತ್ತು ಸತ್ವಪೂರ್ಣ. ಅವರ ಭಾಷಣಗಳು ನಿರರ್ಗಳ ರಸಪೂರ್ಣ ಪ್ರವಾಹಗಳು.

ಶ್ರೀಮಾನ್ ಬಿ. ಎಂ. ಶ್ರೀಯವರ ವ್ಯಕ್ತಿತ್ವದಲ್ಲಿ ಕಿರಿಯರಿಗೆ ಪ್ರೋತ್ಸಾಹ ಹೊಸ ಬರಹಗಾರರಿಗೆ ಎಲ್ಲ ಬಗೆಯ ನೆರವು (ಶ್ರೀಮಾನ್ ಮಾಸ್ತಿಯವರು ರೂಪಿಸಿದ್ದ ಲೇಖಕರ ಅನೌಪಚಾರಿಕ ಸಹಾಯ ನಿಧಿಯಲ್ಲಿ ಅವರೂ ಪ್ರಮುಖರಾಗಿದ್ದರು), ಔದಾರ್ಯ, ದೇಶಪ್ರೇಮ, ಹೊಸ ಬರಹಗಾರರ ಹಸ್ತಪ್ರತಿಗಳನ್ನು ಸಹ ಅವಲೋಕಿಸಿ ಬದಲಾವಣೆಗಳನ್ನು ಸೂಚಿಸುವುದು: ಉತ್ತಮವಾದುದನ್ನು ಮುಕ್ತಕಂಠದಿಂದ ಮೆಚ್ಚುವುದು, ಹಳ್ಳಿಗಾಡಿನ ಪ್ರೇಮ ಇವೆಲ್ಲ ಸಮರಸವಾಗಿ ಮಿಳಿತವಾಗಿದ್ದವು. ಅವರು ಒಂದೆಡೆ "....ನಮ್ಮ ಹಳ್ಳಿಗಳ ಎಲ್ಲ ಬಗೆಯ ಕೊಳಕು ಕೊರತೆಗಳು ಮಾಯವಾಗಿ ಅವು ಮತ್ತೆ ನಂದನವನಗಳಾಗಬೇಕು. ಜನ ತೇಜಸ್ವಿಗಳಾಗಬೇಕು. ಚೊಕ್ಕಳ ಆರೋಗ್ಯ, ವಿದ್ಯೆ, ಒಕ್ಕಟ್ಟು, ಸಾಹಸ, ದೇಶಾಭಿಮಾನ, ಭಾಷಾಭಿಮಾನ, ಧರ್ಮಶ್ರದ್ಧೆ, ತುಂಬು ಬದುಕು ಹಳ್ಳಿಗಳಲ್ಲಿ ಮತ್ತೆ ಮನೆ ಮಾಡಬೇಕು. ಎಲ್ಲೆಲ್ಲಿಯೂ ಸಿರಿಯೂರು ಸಿರಿಹಟ್ಟಿ ಸಿರಿ ಹೊಳಲು ಹೊಂದಿ ಜನಪದ ಹಾಡುಗಳು ಮತ್ತೆ ಊಟೆ ಬುಗ್ಗೆಯಂತೆ ನಲಿದಾಡಬೇಕು. ಗೆಯ್ಮೆ ಗೆಯ್ಯುತ್ತಾ ಹಾಡು ಹೊಮ್ಮಬೇಕು. ನಾಡು ಹಸನಾಗಬೇಕು. ಹಳ್ಳಿಗಳು ದೊಡ್ಡ ಬದುಕು ಬದುಕಿದರೆ ನಾಡಿಗೆ ನಾಡೇ ಬಾಳೀತು. ಬೆಳಗೀತು" ಎಂದು ಹೇಳಿದ್ದಾರೆ.

"ಆಳ್ ತಾಯ್ ಬಾಳ್ ತಾಯ್ ಗೆಲ್ ತಾಯ್
ಕನ್ನಡಿಗರ ಅಧೀಶ್ವರಿ ಓ ರಾಜೇಶ್ವರೀ"

ಇದೇ ನಮ್ಮೆಲ್ಲರ ಆಸೆ ಬಯಕೆ ಪ್ರಾರ್ಥನೆ ಆಗಲಿ.

---

" ಜಳ್ಳನ್ನು ತೂರಿ ಕಾಳನ್ನು ತುಂಬಿಕೊಳ್ಳಿ."



# ಬಿ. ಎಂ. ಶ್ರೀ. ಅವರು ಮನೆಗೆ ಬಂದಾಗ



✻ ಎ. ಎಸ್. ಮೇಲುಕೋಟೆ

ಸುಮಾರು ೪೦ ವರ್ಷಗಳ ಹಿಂದೆ ನಾನು ಹೈದರಾಬಾದಿನ ಒಂದು ಶಾಲೆಯಲ್ಲಿ ವಿದ್ಯಾರ್ಥಿ ಆಗಿದ್ದೆ. ಆಗ ನಮ್ಮ ಮನೆ ಹರ್ಡೀಕರ್ ಬಾಗ್ ಎಂಬ ಒಂದು ಬಡಾವಣೆಯಲ್ಲಿ ಇತ್ತು. ನಮ್ಮ ತಂದೆ ಶ್ರೀ ಮೇಲುಕೋಟೆ ಎಸ್. ಸೀತಾರಾಮರಾಯರು ೬೦ ಮೈಲಿ ದೂರದಲ್ಲಿದ್ದ ನಲ್ಲಗೊಂಡ ಜಿಲ್ಲೆಯಲ್ಲಿ ಎಕ್ಸಿಕ್ಯೂಟಿವ್ ಇಂಜಿನಿಯರ್ ಆಗಿದ್ದರು. ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಹೈದರಾಬಾದಿನಲ್ಲಿ ಸಂಸಾರ ಹೂಡಿದ್ದರು. ನಾವು ಕನ್ನಡಿಗರಾದ ಕಾರಣ ಹೈದರಾಬಾದಿನಲ್ಲಿ ಆಗಮಿಸುತ್ತಿದ್ದ ಪ್ರಮುಖ ಕನ್ನಡಿಗರು ನಮ್ಮ ಮನೆಗೆ ಬರುತ್ತಿದ್ದರು. ಮಾಸ್ತಿಯವರು ಹಾಗೂ ಬಿ. ಎಂ. ಶ್ರೀಯವರುಗಳು ನಮ್ಮ ಮನೆಗೆ ಬಂದಿದ್ದ ಸವಿ ನೆನಪುಗಳು ನನಗಿದೆ. ಬಿ. ಎಂ. ಶ್ರೀಯವರು ನಮ್ಮ ಮನೆಗೆ ಭೋಜನಕ್ಕೆ ಬಂದಿದ್ದು ನನಗೆ ಚೆನ್ನಾಗಿ ನೆನಪು ಇದೆ. ಮನೆಯ ಹಜಾರದಲ್ಲಿ ಹಿರಿಯರೂ ಕಿರಿಯರೂ ಎಲ್ಲರೂ ಭೋಜನಕ್ಕೆ ಕುಳಿತಿದ್ದೆವು. ಆಗ ನಮ್ಮ ತಂದೆಯವರು ಬಿ. ಎಂ. ಶ್ರೀಯವರಿಗೆ ನನ್ನ ಪರಿಚಯ ಮಾಡಿಕೊಟ್ಟು, ಇವನು ಲೆಕ್ಕದಲ್ಲಿ ಬಹಳ ಚುರುಕಾಗಿರುತ್ತಾನೆ ಎಂದು ಪೀಠಿಕೆ ಹಾಕಿದ್ದರು. ಬಿ. ಎಂ. ಶ್ರೀ.ಯವರು ಅದೇ ಧಾಟಿಯಲ್ಲಿ ಮಗೂ, ಹೈದರಾಬಾದಿನಿಂದ ಬೆಂಗಳೂರಿಗೆ ರೈಲು ದಾರಿ ಸುಮಾರು ೩೦೦ ಮೈಲಿಗಳಾಗುತ್ತದೆ. ಹಾಗಾದರೆ ನೀನು ಹೈದರಾಬಾದಿನಿಂದ ಬೆಂಗಳೂರಿಗೆ ಹೋಗಿ ಮರಳಿದರೆ ಎಷ್ಟು ದೂರ ಪ್ರವಾಸ ಮಾಡಿದಂತಾಗುತ್ತದೆ ಎಂದು ಪ್ರಶ್ನಿಸಿದರು. ಆ ಸಣ್ಣ ವಯಸ್ಸಿನಲ್ಲೂ ನನಗೆ ಇದು ಕಷ್ಟದ ಪ್ರಶ್ನೆ ಎಂದು ಕಾಣಲಿಲ್ಲ. ಇದಕ್ಕೆ ಸ್ವಾರಸ್ಯಕರವಾಗಿ ಉತ್ತರ ಕೊಡಬೇಕು ಎಂಬ ಹಂಬಲದಿಂದ ನಾನು "ಸೊನ್ನೆ" ಎಂದು ಉತ್ತರಿಸಿದೆ. ಬಿ. ಎಂ. ಶ್ರೀ.ಯವರು ಮತ್ತು ಇತರ ಹಿರಿಯರೆಲ್ಲಾ ಗೊಳ್ಳ್ ಎಂದು ನಕ್ಕುಬಿಟ್ಟರು. ಭೋಜನದ ನಂತರ ಅವರು ನನ್ನ ಬೆನ್ನು ತಟ್ಟಿ ಭೇಷ್ ಎಂದಿದ್ದು ಇಂದಿಗೂ ನನಗೆ ನೆನಪು ಇದೆ. ನಮ್ಮ ತಂದೆಗೆ ಈಗ ೮೯ ವರ್ಷಗಳು ತುಂಬಿರುತ್ತದೆ. ನಮ್ಮ ತಂದೆಯವರೊಡನೆ ಈ ಭೇಟಿಯ ಬಗ್ಗೆ ಹೆಚ್ಚು ವಿವರಗಳನ್ನು ಕೇಳಿದಾಗ ಅವರೆಂದರು, ಇನ್ನು ಹೆಚ್ಚು ನೆನಪು ಇಲ್ಲಾ. ನಾನು ಬಿ. ಎಂ. ಶ್ರೀ.ಯವರನ್ನು ಮದ್ರಾಸ್ ಮತ್ತು ಗುಲ್ಬರ್ಗದಲ್ಲಿ ಭೇಟಿಯಾಗಿದ್ದೆ. ಗುಲ್ಬರ್ಗಕ್ಕೆ ಬಂದಾಗ ಬಿ. ಎಂ. ಶ್ರೀ.ಯವರ ಜೊತೆಯಲ್ಲಿ ಒಬ್ಬ ತರುಣ ಕವಿ ಬಂದಿದ್ದರು. ಆ ಕವಿಯ ಹೆಸರು ಮರೆತುಹೋಗಿದೆ. ಆದರೆ ಅವರು ಇವತ್ತು ಕನ್ನಡದಲ್ಲಿ ಮಹಾ ಕವಿ ಆಗಿದ್ದಾರೆ ಎಂದು ಹೇಳಿದರು. ಈ ಕವಿಗಳ ಹೆಸರು ಏನು ಎಂದು ಸ್ವಲ್ಪ ಒತ್ತಾಯದಿಂದ ಕೇಳಿದಾಗ ಅವರು ನೆನಪು ಮಾಡಿಕೊಂಡು ಶ್ರೀ ಕೆ. ವಿ. ಪುಟ್ಟಪ್ಪ (ಕುವೆಂಪು) ಎಂದು ಹೇಳಿದರು.



# ಶ್ರೀನಮನ

* ಸುಜನಾ

ಈಗಿನ್ನುಮೇಲಾದರೂ ಶ್ರೀ ಅವರ ಸಾಹಿತ್ಯಕವಾದ ಹಾಗೂ ನಾಡು ನುಡಿಯನ್ನು ಕುರಿತ ಕೊಡುಗೆಯ ನಿಜ ಮೌಲ್ಯಮಾಪನ ಮಾಡುವುದು ಸೂಕ್ತವಾಗಿದೆ. ಇದ್ದಾಗ ಹೊಗಳಿ ಹೊನ್ನಪಂಜರದೊಳಿಟ್ಟಂತೆ ಆಳಿದ ಮೇಲೆ ಅವರನ್ನೆ ಗೇಲಿಮಾಡಿ, ಸ್ಥಾನಚ್ಯುತಿ ಮಾಡುವ ಭ್ರಾಂತಿ ಸುಪ್ತಿಯಲ್ಲಿರುತ್ತ ನಮ್ಮನ್ನೆ ಗೇಲಿಮಾಡಿಕೊಳ್ಳುವ ವಿಷಾದ ವಿನೋದ ಪ್ರಸಂಗಗಳು ಶ್ರೀಯವರಿಗೆ ಸಂಬಂಧಿಸಿದಂತೆಯೂ ಸಾಗುತ್ತಲೆ ಇವೆ. ಇವುಗಳನ್ನು ಒರೆಗಚ್ಚುವುದು ನಿಜಾವಿಷ್ಕಾರದ ದೃಷ್ಟಿಯಿಂದ ಅತ್ಯಗತ್ಯ. ಅವರ ಸಾಹಿತ್ಯ ಕೃತಿಗಳ ಬಣ್ಣಗೆಡಿಸುವ, ಸಾಹಿತ್ಯೇತರ ಭಾವನೆಗಳನ್ನು ಚಟುವಟಿಕೆಗಳನ್ನು ಸಣ್ಣದಾಗಿಸುವ, ಸನ್ನಿವೇಶ ಪ್ರಜ್ಞೆಯಿಲ್ಲದ ಟೀಕೆಗಳನ್ನು ಗಮನಿಸಿ ಈ ಮೌಲ್ಯ ನಿರ್ಧಾರವಾಗುವುದು ತಕ್ಕದು. 'ಶ್ರೀ ಅವರು ಹೇಳಿಕೊಳ್ಳುವಂತಹ ಇಂಗ್ಲಿಷ್ ವಿದ್ವಾಂಸರಾಗಿರಲಿಲ್ಲ ; ಅವರಿಗೆ ರಾಜಭಕ್ತಿ ಇತ್ತೆ ವಿನಾ ರಾಷ್ಟ್ರೀಯ ಭಾವಾವೇಶವಿರಲಿಲ್ಲ ; ಅವರ ಕೃತಿಗಳಿಗೆ ಅಂಥ ಅತಿಶಯ ಸಾಹಿತ್ಯಕ ಮೌಲ್ಯವಿಲ್ಲ ; ವಿಮರ್ಶೆ ಕೂಡ ವಸ್ತುನಿಷ್ಠವಲ್ಲ'— ಇತ್ಯಾದಿ ಇತ್ಯಾದಿ ಬೆಲೆಕಟ್ಟುವ ಮಾತುಗಳು ಕಡೆಕಡೆಗೆ ವ್ಯಕ್ತಿನಿಷ್ಠುರವಾಗಿರುವುದೂ ಉಂಟು.

ನಾನು ಅವರನ್ನು ನೋಡಬರಲಿಲ್ಲ. ಹೈಸ್ಕೂಲ್ ಮುಗಿಯುವವೇಳೆಗವರು ದಿವಂಗತರಾಗಿದ್ದರು. ನನಗೇನಿದ್ದರೂ ಪ್ರೊ|| ತೀ.ನಂ.ಶ್ರೀ., ಪ್ರೊ|| ಡಿ.ಎಲ್.ಎನ್., ಪ್ರೊ|| ಕೆ. ವಿ. ರಾ. ಅವರಂಥ ಶ್ರೀ ಅವರ ಆಪ್ತ ಶಿಷ್ಯರಿಂದ ಕೇಳಿ ಪಡೆದಿದ್ದ ಅವರ ಚಿತ್ರ ಕಾಣುತ್ತಿತ್ತು ಆಗ. ಅಶ್ವತ್ಥಾಮನ್, ಪಾರಸೀಕರು, ಇಂಗ್ಲಿಷ್ ಗೀತಗಳು, ಕೈಪಿಡಿ ಕೃತಿಗಳನ್ನು ಪಾಠಹೇಳಿ ಆ ಸತ್ತ್ವಸಂಪನ್ನರ ಮತ್ತೊಂದು ಚಿತ್ರ ಕಾಣಬಂದಿತ್ತು. ಹೊಸಗನ್ನಡ ಕವನಗಳ ಹೊಸ ನುಡಿಗಟ್ಟು, ಹೊಸ ಲಯನಿರ್ಮಾಣದಲ್ಲಿ ಇಂಗ್ಲಿಷ್ ಗೀತಗಳ ಕೊಡುಗೆ ಎಷ್ಟು ? ಎಷ್ಟಲ್ಲ ? ಅವರೇಕೆ

ಇಂಗ್ಲಿಷ್ ಭಾಷೆಯು ಕೇವಲ ಶ್ರೇಷ್ಠ ಭಾವಗೀತೆಗಳನ್ನೆ ಆಯ್ಕೆ ಮಾಡಿಕೊಳ್ಳಲಿಲ್ಲ? ಅಲ್ಲಲ್ಲ ಅವರು ಉಜ್ವಲವಾಗಿ ಅಷ್ಟಾಗಿ ಕಾಣರೇಕೆ?— ಎಂದೆಲ್ಲ ಯೋಚಿಸುವಂತಾಯಿತು. ಆದರೆ ಕನ್ನಡದ ಹೊಸಲಯವಿನ್ನೂ ಸ್ಪಷ್ಟವಾಗಿಲ್ಲದಾಗ ಅವರಾದರೂ ಎಷ್ಟೊಂದು ಹೊಸ ಲಯಗಳನ್ನು ಬಿತ್ತಿಬಿಟ್ಟರು ನಮ್ಮ ಮುಂದ. ಈಗ ಬಂದಿರುವ ನಾನಾ ರೀತಿಯ ಬೆಳಸಿನಲ್ಲಿ ಆ ಅವರ ಚೆಲ್ಲು ಬಿತ್ತನೆ, ಅಗಲನಾಟಿಗಳಾವುವೂ ಕಾಣಿಸದಿರುವುದು ಸಹಜ. ಹಾಗೆಯೆ ಈಗ ಪಕ್ವವಾಗುತ್ತಿರುವ ಕಾವ್ಯ ಭಾಷೆಯ ನಿಟ್ಟಿನಲ್ಲಿ ಅವರು ರೂಪಿಸಿಕೊಂಡ ನುಡಿಗಟ್ಟು ಅಷ್ಟೇನೂ ಹೊಳಪಿಲ್ಲದೆ ನುರುಕಿಲ್ಲದೆ ಇರುವಂತೆ ಕಾಣಬಹುದು. ಆದರೆ ಹೊಸ ಕಾವ್ಯದ ಮೊದಲ ಆರಂಭದ ಆಗ್ರೈಮೆಯ ಹಿರಿಮೆ ತಿಳಿಯಲು ಬೇಂದ್ರೆ, ಕುವೆಂಪು, ಪುತಿನ, ಮಾಸ್ತಿ ಮುಂತಾದ ಹಿರಿಯ ಕವಿಗಳ ಆಕಾಲದ ಕಾವ್ಯೋಕ್ತಿ ಯಾವ ಪ್ರಾರಂಭಿಕ ಕ್ಲೇಶವನ್ನು ಹದಗೊಳಿಸುತ್ತಿತ್ತೆಂಬುದನ್ನು ಪರೀಕ್ಷಿಸಿ ನೋಡಬಹುದು.

ಹಾಗೆಯೆ ಅವರ ವಿಮರ್ಶೆಯ ವ್ಯಕ್ತಿನಿಷ್ಠತೆಯ ವಿಷಯವಾದರೂ ಕೂಡ ಶ್ರೀಯವರು ವಿಮರ್ಶೆ ಬರೆಯತೊಡಗಿದ್ದಾಗ ನಮ್ಮ ಜನಕ್ಕೆ ತಮ್ಮ ತಮ್ಮ ಸಾಹಿತ್ಯದ ಬಗೆಗಿನ ಏನೊಂದೂ ಸರಿತಿಳಿವು ಅಷ್ಟಾಗಿರಲಿಲ್ಲ. ಆಗ ಆತ್ಮೀಯವಾದ ಭಾವಪೂರ್ಣವಾದ ವಿಮರ್ಶೆ ಬೇಕಿತ್ತು. ಶಸ್ತ್ರವಿಚಿಕಿತ್ಸೆಯ ರೀತಿಯದಲ್ಲ. ಮುದ್ದಣನ ಶ್ರೀ ರಾಮಾಶ್ವಮೇಧ ಕೃತಿಯನ್ನು ಕುರಿತು ೧೯೦೨ರ ವೇಳೆಗೆ ಅವರಿಗಿನ್ನೂ ಆಗ ೧೯ ವರ್ಷ. ಅವರು ಬರೆದ ವಿಮರ್ಶೆಯಾದರೂ ಎಂಥ ತೂಕದ ವಿದ್ವತ್ ಪೂರ್ಣವಾದ ಬರೆಹ. ಪಂಪ ಕುಮಾರವ್ಯಾಸರನ್ನು ಕುರಿತ ಅವರ ಮಾತು ಸಾರದಲ್ಲಿ ಕೇವಲ ಮೂಲಭೂತವಾದುವಾಗಿವೆ. ಆದಿಪುರಾಣವನ್ನು ಪಂಪಭಾರತಕ್ಕೆ ಒಂದು ಕೈ ಮೇಲಾದ ಕವಿತಾವೇಶದ ಪ್ರಥಮ ಸ್ಫೂರ್ತಿಯಿಂದ ಪ್ರಜ್ವಲಿಸುವ ಕೃತಿಯೆಂದು ಸಾರಿದ ಶ್ರೀ ಅವರ ಕಾವ್ಯಾನುಸಂಧಾನದ ಶ್ರೀಮಂತ ಸತ್ತ್ವವನ್ನು ಹೇಗೆ ಕೆಳಗಣ್ಣಿಂದ ಕಾಣಬಂದೀತು. (ಕುವೆಂಪು ಅವರು ಕೂಡ ಇದೇ ನಿಲುವನ್ನು ಕೊಂಚ ಬೇರೆ ಕಾರಣಗಳಿಗಾಗಿ ತೋರುತ್ತಾರೆ.) ಕಡೆಗೂ ಈ ಮಹನೀಯರ ದೃಷ್ಟಿಯೇ ಋಜುವಾಗಿ ತೋರಿತು.

ಆ ಕಾಲದಲ್ಲಿ ಮೈಸೂರು ರಾಜ್ಯ ಸಾತ್ತ್ವಿಕರೆಂದು ಪ್ರಸಿದ್ಧರಾಗಿದ್ದ ರಾಜರ ಆಡಳಿತದಲ್ಲಿತ್ತು. ಶ್ರೀ ಅವರಂಥವರಿಗೇಕೆ ಅವರ ಪೀಳಿಗೆಯವರಿಗೆ ಅಂಥ ಪ್ರಭಾವದಿಂದ ಸಿಡಿದಾಚೆ ಬರುವುದು ಬಗೆ ಬಗೆ ಕಾರಣಗಳಿಂದಾಗಿ ಕಷ್ಟವಿತ್ತು. ಈಗೀಗ ಅದರಲ್ಲಿ ದೋಷಕಾಣುತ್ತಿರುವ ಅವರ ಶಿಷ್ಯರಾದರೂ ಆ ಪ್ರಭಾವವನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಮಹತ್ತಿಗೆ ಆಗಿನ್ನೂ ಬೆಳೆದಿರಲಿಲ್ಲ. ಮೇಲಾಗಿ, ಭಾರತೀಯನಾದ ಇಂಗ್ಲಿಷ್ ಪ್ರಾಧ್ಯಾಪಕನಿಗಿಂತ ಆಂಗ್ಲರಾಗಿದ್ದ ಇಂಗ್ಲಿಷ್ ಪ್ರಾಧ್ಯಾಪಕರುಗಳಲ್ಲೆ ಅವರು ಹೆಚ್ಚು ಶ್ರೀಮಂತಿಕೆ ಕಾಣುವಷ್ಟು ಪ್ರಬುದ್ಧರಾಗಿದ್ದರು. ಅವರ ಪರಕೀಯತಾ ಪೂಜೆ ಹಾಗೆ ವ್ಯಕ್ತವಾಗಿತ್ತೆಂದೇಕೆ ಹೇಳಬಾರದು? ಆದರೂ ಅವರು ರಾಷ್ಟ್ರೀಯರು. ಶ್ರೀಯವರು ಇಂಗ್ಲೆಂಡಿನಿಂದ ಬಂದ ಇಂಗ್ಲಿಷ್ ಪ್ರಾಧ್ಯಾಪಕರ ನಡುವೆ ಏಗಬೇಕಿತ್ತು. ಮತ್ತೆ ಇಲ್ಲಿನವರೆ ಆದ ಕೆಲವು ವಿದೇಶಿ ಪ್ರಾಧ್ಯಾಪಕರ ನಡುವೆ ಬಾಳಬೇಕಿತ್ತು. ಎಲ್ಲರೂ ಕನ್ನಡವೆಂದರೆ ಮೂಗು ಮುರಿಯುತ್ತಿದ್ದ ಕಾಲ. ಈ ದಿನಗಳಲ್ಲಿ, ಕನ್ನಡ ಪ್ರಾಧ್ಯಾಪಕರಾಗಿರುವವರು ಸಾಹಿತಿ ಮಹಾಸಾಹಿತಿಗಳಾಗಿರುವವರು ತಮ್ಮ ಒಳ ಕೊರತ–ಕೊರೆತಗಳನ್ನು ತುಂಬಿಕೊಳ್ಳುವಂತೆ—ಮೇಲೆ ಮೇಲೆ ಕನ್ನಡ ಚಳವಳಿ ಬಳುವಳಿಗಳ ನೇತಾರರಾಗಿದ್ದರೂ ಹಿಂದೆ ಹಿಂದೆ ತಮ್ಮ ಮಕ್ಕಳನ್ನೆಲ್ಲ ಅಮೆರಿಕಾ, ಇಂಗ್ಲೆಂಡ್ ಪ್ರಜೆಗಳಾಗಲು ಸಿದ್ಧಪಡಿಸುವುದಕ್ಕಾಗಿಯೊ ಏನೊ, ಅವರಿಗೆಲ್ಲ ಶಿಶುವಿಹಾರದಿಂದಲೆ ಇಂಗ್ಲಿಷ್ ಮಾಧ್ಯಮದ ಶಿಕ್ಷಣ ಕೊಡಿಸುತ್ತಿರುವುದನ್ನು ಕಂಡೂ ಕಾಣದಂತಿದ್ದೇವೆ; ಮೇಲಾಗಿ ಜೋರು ಭಾಷಣಗಳಿಗೆ ಎಲ್ಲ ಬೆಲೆಯನ್ನು ಕೊಡುತ್ತಿದ್ದೇವೆ. ಶ್ರೀಯವರು ಎಲ್ಲ ವಿರೋಧದ ಮಧ್ಯೆ ಕೆಲಸ ಮಾಡಬೇಕಿತ್ತು. ಕನ್ನಡದಲ್ಲಿ ಕೆಲಸ ಮಾಡಿದರೆ, ಈತನಿಗೆ ಸರಿಯಾಗಿ ಇಂಗ್ಲಿಷ್ ಬರದು ಎಂದು ನಿರ್ಧಾರಕ್ಕೆ ಬರುತ್ತಿದ್ದ ಕಾಲವದು. ಇಂಗ್ಲಿಷ್ ಪ್ರಾಧ್ಯಾಪಕರಾಗಿ ಏಗಬೇಕಾಗಿದ್ದವರಿಗದು ಕಹಿಯಾದ ಗುಳಿಗೆ. ಆದ್ದರಿಂದ ಬಹಿರಂಗ ಭಾಷಣಗಳಲ್ಲಿ ಇಂಗ್ಲಿಷ್ ಮಾಧ್ಯಮವಾಯಿತವರಿಗೆ ೧೯೩೮ರ ತನಕ. ಆದರೆ ಕನ್ನಡ ಬರೆಹ ಸೇವೆಗಳು ೧೯೦೦ ರಷ್ಟು ಹಿಂದೆಯೆ ಆರಂಭಗೊಂಡಿತ್ತು. ಕನ್ನಡ ಎಂ.ಎ. ಪ್ರವಚನ ಪ್ರಾರಂಭಿಸಿ ಅವರು ಅದರ ಗೌರವ ಪ್ರಾಧ್ಯಾಪಕರಾಗಿದ್ದರಿಂದ ಅವರಿಗೆ ಕೊಂಚ ಬೆಲೆ ಇಳಿದಿದ್ದಿರಬಹುದು ಆಗ—'ನೋಡಿ, ಈ ಇಂಗ್ಲಿಷ್ ಪ್ರಾಧ್ಯಾಪಕ ಏಗಲಾರದೆ ಈಗ ಕನ್ನಡಕ್ಕೆ ಹೋದ' ಎಂಬ ಟೀಕೆಗೆ ತುತ್ತಾಗಿದ್ದರೂ ಆಶ್ಚರ್ಯವಿಲ್ಲ. ಆದರೆ ಅವರಿಂದ ಕನ್ನಡ ಪ್ರವಚನಕ್ಕೆ ಆಗ ಗೌರವ ಬಂತು. ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರನ್ನು ಎರಡನೆ ವರ್ಗ ಪ್ರಜೆಗಳಂತೆ ಕಂಡುಕೊಳ್ಳುವುದನ್ನು ತಪ್ಪಿಸಲು, ಎಂ.ಎ. ಪದವೀಧರರು ಮಾತ್ರವೆ ಅಧ್ಯಾಪಕರಾಗುವಂತೆ ಪಠ್ಯಕ್ರಮ ಏರ್ಪಡಿಸಿ

ದರು. ಇಂಗ್ಲಿಷ್ ಪ್ರಾಧ್ಯಾಪಕರೂ ಶ್ರದ್ಧೆಯಿಂದ ಅಭ್ಯಸಿಸಿ ಪ್ರವಚನ ಮಾಡಬೇಕಾದಷ್ಟು ಶ್ರೀಮಂತವಾಗಿದೆ ಕನ್ನಡವೆಂಬುದನ್ನು ತೋರಿದರು.

ಕನ್ನಡದ ಮಾತಾಡಿ ಇಂಗ್ಲಿಷ್ ಭಕ್ತರಿಗೆ, ಕರ್ನಾಟಕ ಏಕೀಕರಣದ ಮಾತಾಡಿ ಬ್ರಿಟಿಷ್ ಇಂಡಿಯಾ ಭಕ್ತರಿಗೆ ಬೇಡವಾದರು. ರಾಷ್ಟ್ರೀಯತೆಯನ್ನು ರಬ್ಬರಬ್ಬಾಗಿ ಪ್ರತಿಪಾದಿಸದಿದ್ದರೂ ಆ ಕಾಲದಲ್ಲಿ ಜನಭಾಷೆಯ ಬಗೆಗೆ, ಹಾಗೂ ಅದರ ಏಳಿಗೆಗೆ ಕಾರಣವಾಗುವ ಏಕೀಕರಣದ ಬಗೆಗೆ ಹುಚ್ಚುಗನಸು ಕಾಣುತ್ತಿದ್ದುದು ಇಂದಿನ ಆರ್ಥದ ತೋರಿಕೆಯ ರಾಷ್ಟ್ರೀಯತೆ ಆಗಿಲ್ಲದಿರಬಹುದು. ಅಂದೆಲ್ಲ ಪರದೇಶಿ ಭಕ್ತರಾಗಿಯೆ ಇದ್ದು ಪರದೇಶಿಗಳಾಗಿದ್ದ ಕೆಲವು ಸಾಹಿತಿಗಳು, ಸ್ವಾತಂತ್ರ್ಯನಂತರದ ದಿನಗಳಲ್ಲಿ ಗಾಂಧೀವಾದಿಗಳಾದುದು ಸುಳ್ಳೇನೂ ಅಲ್ಲ. ಅಂದೆಲ್ಲ ರಾಷ್ಟ್ರೀಯ ಧೋರಣೆ ಮೆರೆದೂ ಆಮೇಲಣ ದಿನಗಳಲ್ಲಿ ಜನದ್ವೇಷಿಗಳಾದವರೂ ಇಲ್ಲದಿಲ್ಲ. ಶ್ರೀ ಅವರು ಮೇಲೆ ರಾಜಾಸ್ತಾನ ಗಾಂಭೀರ್ಯ ಬೆಳೆಸಿಕೊಂಡಿದ್ದರೆಂದು ಪ್ರಸಿದ್ಧರಾಗಿದ್ದರೂ—'ಕನ್ನಡದ ಕಾವಲುನಾಯಿ ನಾನು; ಅದಕ್ಕೆ ಕಾವು ತಟ್ಟುವುದಾದರೆ ಬಗಳುವುದುಂಟು: ಕಚ್ಚುವ ನಾಯಲ್ಲ'—ಎಂದೂ ಹೇಳುವ ಕನ್ನಡ ಜನಪದ ಪ್ರೀತಿಯಿದ್ದವರು. ರಾಜಾಸ್ತಾನದ ಸೆಳೆತ ಎಷ್ಟೆಂಬ ಅರಿವು ಅವರಿಗಿತ್ತಾಗಿ ಪಂಪನನ್ನು ಕುರಿತ ಈ ಮಾತನ್ನು ಬರೆಯುತ್ತಾರೆ: "ಆತನಿಗೆ(ಪಂಪನಿಗೆ) ಆ ಕೆಲಸವನ್ನು ಒಪ್ಪಿಸಿದ ಅರಿಕೇಸರಿಗೆ ನೆಚ್ಚಿಕೆ. ಕೆಲಸವೂ ನೆಚ್ಚಿದಂತೆಯೆ ನೆರವೇರಿತು. ಆದರೂ ಮಹಾಭಾರತದ ಉಜ್ವಲ ಜ್ವಾಲೆಗೆ ಸ್ವಲ್ಪ ಮಂಕು ಮುಚ್ಚದೆ ಹೋಗಲಿಲ್ಲ . . . ಪಂಪನಿಗೆ ಕೊಟ್ಟ ಸ್ವಭಾವವದು; ಅಷ್ಟು ಮಟ್ಟಿಗೆ ಪಂಪನು ಆ ಸಮಸ್ಯೆಯ ತೊಡಕನ್ನು ಬಿಡಿಸಿಕೊಂಡು, ಕನ್ನಡದ ಕಾವ್ಯಗಳಲ್ಲಿ ಗುರುಸ್ಥಾನದಲ್ಲಿರುವ ಮಹಾ ಕಾವ್ಯವನ್ನು ಸೃಷ್ಟಿಸಲು ಶಕ್ತನಾದನೆಂದರೆ ಆತನ ಪ್ರತಿಭೆಯ ಶ್ರೇಷ್ಠತೆಗೆ ಆಶ್ಚರ್ಯವಾಗುವುದೇ ಹೊರತು ಕೊರತೆ ಕಾಣಿಸಿಕೊಂಡದ್ದಕ್ಕೆ ಆಶ್ಚರ್ಯವಾಗುವುದಿಲ್ಲ." ೧೯೧೬ ರಲ್ಲಿ ಬರೆದ "ಭರತಮಾತೆಯನುಡಿ" ಎಂಬ ಅವರ ಕವನದಲ್ಲಿ ಬರುವ ಮಕ್ಕಳು-ತಾಯಿಯ ಮಾತಿನ ಎರಡು ದನಿಗಳು ಪ್ರತಿಪಾದಿಸುವ ಮಾತುಗಳನ್ನಿಲ್ಲಿ ಅಗತ್ಯವಾಗಿ ಗಮನಿಸಬೇಕು.

"ನಿನ್ನ ಹೆರರಿಗೆ ಕೊಟ್ಟೆವು-ನೀ
ನಿನ್ನು ಸಾಕದೆ ಕೆಟ್ಟೆವು.
ನಮ್ಮ ಮನೆಯಲಿ ನಾವು ಹೆರರಿಗೆ ದುಡಿವ
ತೊತ್ತುಗಳಾದೆವು."

ಎಂಬ ಮಾತು ಬ್ರಿಟಿಷರ ಆಳ್ವಿಕೆಯ ಉಚ್ಛ್ರಾಯದ ದಿನಗಳಲ್ಲಿ ರಾಜಪ್ರಭುತ್ವದ ರಾಜ್ಯದಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿದ್ದವರೊಬ್ಬರು ಬರೆದ ಮಾತು. ನಮ್ಮ ನಾಡು ಹೀನಾವಸ್ಥೆಗೆ ಬಂದುದಕ್ಕೆ ಜಾತಿ ಮತಗಳ ಹೊಣೆಯನ್ನೀಗ ಬಹುತೇಕವಾಗಿ ನಾವೆಲ್ಲ ಬೊಟ್ಟು ಮಾಡಿ ಹೇಳುತ್ತಿದ್ದೇವೆ (ಹೀಗಿದ್ದೂ ಅವುಗಳ ತಾರಕವೆಂದು ಇಂದಿಗೂ ಅದರಲ್ಲೂ ಶಿಥಿಲವಾಗುತ್ತಿರುವ ಜಾತಿಗಳು ಪುನರುಜ್ಜೀವನಗೊಳ್ಳಲೇ ಬೇಕೆಂಬ ಹೆಗ್ಗನಸು ಕಾಣುತ್ತಿರುವವರೂ ಇಲ್ಲದಿಲ್ಲ.) ಆದರೆ ಆಗ ಈ ದೃಷ್ಟಿ ವಿರಳವಾಗಿತ್ತು—ರಾಷ್ಟ್ರೀಯತಾ ಭಾವದ ಹಿರಿಯ ನಾಯಕರಲ್ಲೂ ಕೂಡ. ಹಾಗಿದ್ದಾಗ ಶ್ರೀಯವರು ಆಗ ಭಾರತಾಂಬೆಯ ಬಾಯಲ್ಲಿ ಆಡಿಸಿದ ಮಾತಿದು:

"ಹೊಳೆದ ಸತ್ಯವ ಹಿಡಿದು ಮುಂದಕೆ
ನೂಕಲಮ್ಮದೆ ಸೆಡಿದಿ
ಹಳದ ನೆಮ್ಮುತ ಜಾತಿಮತಗಳ ಮದದ
ಗುಹೆಯಲಿ ಕೆಡೆದಿರಿ
ಬಯಲ ಬೆಳಕಿಗೆ ಮುಳಿದಿರಿ-ಸಮ
ದಯದ ನಡತೆಯ ಹಳಿದಿರಿ"

ಎಷ್ಟೆಲ್ಲ ಧರ್ಮ ಗುರುವನ್ನು ಕಳಿಸಿದರೂ ಆ ತಾಯಿ ಈ ಮಕ್ಕಳು ಎಚ್ಚರದೆ ಮುಸುಕು ಹಾಕಿ ಗೊರಕೆ ಹೊಡೆ ದದ್ದರಿಂದ ತನ್ನ ಮಕ್ಕಳನ್ನೆಚ್ಚರಿಸಲು ತನ್ನ ಕಾವಲ ನ್ನೊಡೆದುಕೊಂಡು "ದೈವಭಕ್ತಿಯ, ಭ್ರಾತೃಧರ್ಮದ ಧೀರಮುಸ್ಲಮಕುಳವನು" ಸ್ವಾಗಸಿಕೊಳ್ಳುತ್ತಾಳೆ. "ಕಡೆ ನೆನೆದೆನು ನನ್ನ ಮನೆತನ ನೇರವಾಗುವ ತೆರವನು, ಕಡ ರಾಣಿ ಬ್ರಿಟಾನಿಯಳ, ನನ್ನಿನಿಯ ತಂಗಿಯ ನೆರವನು ಗೆಲಿದು ನಾಡನು ಬೆಸೆದಳು—ನೆಲದೊಲುಮೆ ಕಟ್ಟನ ಹೊಸೆದಳು . . . ಅವಳ ಗುಣವನು ಮೆರೆಯಿರಿ—ಕಳೆದವ ಕೊರತೆಯ ಮರೆಯಿರಿ . . . ಅರುಹಿ, ನಯದಲಿ ಹೋರಿ ನಂಬಿಸಿ, ಮನೆಯನಾಳಲು ಕಲಿಯಿರಿ; ಶಿಷ್ಟಮಾರ್ಗ ನಡೆಯಿರಿ—ನಿಮ್ಮಿಷ್ಟ ಸಿದ್ಧಿಯ ಪಡೆಯಿರಿ." ಎಂಬ ಶ್ರೀಯ ವರ ದೃಷ್ಟಿಯನ್ನೀಗ ಕ್ರಾಂತಿಮತಿಗಳೆಂದುಕೊಂಡಿರುವವರ ಹೀಗಳೆಯಬಹುದು. ಬ್ರಿಟಿಷರು ಭಾರತಕ್ಕೆ ಬಂದ ದರಿಂದಾದ ಇತ್ಯಾತ್ಮಕ ಲಾಭಗಳನ್ನು ಗಮನಿಸು ಯಾರೂ ಶ್ರೀಯವರ ಭರತಮಾತೆಯ ಮೇಲಿನ ಮಾತನ ಅಲ್ಲಗಳೆಯಲಾರರು. ಕಡೆಯ ಮಾತುಗಳಾದರೂ ಗೋಖ ಯವರ ಕಾಲದಲ್ಲಿ ಬರೆದ ಕವನಕ್ಕೆ ವಿಸಂಗತವಾಗಿಲ್ಲ.

ಕಡೆಯದಾಗಿ ಶ್ರೀ ಅವರ ಸಾಹಿತ್ಯದ ಸಿದ್ಧಿ ಬಗೆಗಿನ ವಿವೇಚನೆ ಕುರಿತಾಗಿ ಒಂದು ಮಾತು. 'ಇಂಗ್ಲಿಷ್ ಗೀತ'ಗಳನ್ನು ಆವರಣಾದಾಚೆಯಿಟ್ಟು ವಿಚಾರ ಮಾಡಿ ತಪ್ಪುವುದಿರಲಿ. ಅವರ ಶುಕ್ರಗೀತ, ಕನ್ನಡ ತಾಯ್ ನೋಟ, ಶ್ರೀಕೃಷ್ಣರಾಜರಿಗೆ ಸಂಬಂಧಿಸಿದ ಕವನ ಮುಂತಾದುವು ವಾಚಾಳಿಯಂತೆ ತೋರಿದರೂ ಅವು ನೀಡು ವಂಥ ಕೆಲವೊಂದು ಚಿತ್ರಗಳ, ಮೂಡಿರುವ ಛಂದೋ ವಿನ್ಯಾಸ ನುಡಿಗೆಯ್ಮೆಗಳ ದೃಷ್ಟಿಯಿಂದ ಗಮನಾರ್ಹ. 'ಪಾರಸೀಕರು' ಗ್ರೀಕ್ ನಾಟಕದ ಅನುವಾದದ ಭಾಷಾ ಸಿದ್ಧಿ-ಛಂದೋಲಯ, ಅದಕ್ಕಿಂತಲೂ ಮಿಗಿಲಾಗಿ 'ಅಶ್ವತ್ಥಾಮನ್' ನಾಟಕ ಸಾಧಿಸಿರುವ ಹಲವಂದದ ಸಿದ್ಧಿ ತುಂಬಾ ಮನನೀಯ. ಅಯ್‌ಸ್ಕ್ಯಲೀಸ್, ಸಾಫೋಕ್ಲೀಸರ ಆ ನಾಟಕಗಳೆರಡೂ ಎರಡು ಬಗೆಯಾಗಿ ನಮ್ಮಲ್ಲಿ ರೂಪ ರೂಪಾಂತರಗೊಂಡು ಬಂದಿವೆ, ಅಲ್ಲಿ. ಅದರಲ್ಲೂ ಅಶ್ವತ್ಥಾಮನ್ ಸೃಷ್ಟಿ ಶ್ರೀ ಅವರ ಕಾವ್ಯ ಸೃಜನಾತ್ಮಕ ಪ್ರತಿಭೆಯ ದ್ಯೋತಕ. ಎರಡು ಭಿನ್ನ ಸಂಸ್ಕೃತಿಯ ಹಿನ್ನೆಲೆ ಯಲ್ಲಿ ಬಂದ ಆ ಕಥೆಗಳಲ್ಲಿ ಮೊದಲ ಸಾದೃಶ್ಯವನ್ನು ಮೊದಲ ಬಾರಿಗೆ ಕಂಡದ್ದೆ ಸೃಜನಾತ್ಮಕವಾದ ರೂಪಕ ಪ್ರತಿಭಾ ಸಾಮರ್ಥ್ಯ. 'ಗಗನ ಸಾಗರ' ಎಂದಾಗ ಆ ದೂರಗಗನ ಈ ಕ್ಷಾರಸಾಗರ ಮದುವೆಗೊಂಡು ಒಂದಾಗಿ ಒಂದೆ ಸಂತಾನದ ಜನಕವಾಗುತ್ತದೆ. ಏಜಾಕ್ಸನಲ್ಲಿ ಅಶ್ವತ್ಥಾಮನನ್ನು ಕಂಡು ಕಂಡರಿಸುತ್ತಾ ಹೋಗಿ ಹೊಸ ಕಲಾಮೂರ್ತಿಯನ್ನು ಸೃಜಿಸಿದ ಪ್ರತಿಭೆ ಯಾವ ಸ್ವೋಪಜ್ಞ ಪ್ರತಿಭೆಗೂ ಕಡಿಮೆಯದಲ್ಲ. ಮುಂದಣ ಪಾತ್ರ ಸಮೀಕರಣದಲ್ಲೂ ಅಸಾಧಾರಣ ಸೃಜನಾತ್ಮ ಕತೆ ಮೆರೆದಿದ್ದಾರೆ. ಮತ್ತೆಲ್ಲೂ ಕಾಣದ ಭಾರ್ಗವಿ ಏಕಲವ್ಯರನ್ನು ಸೃಷ್ಟಿಸಿದ್ದಾರೆ. ಮೇಳಗೀತಗಳಲ್ಲಿ ಕನ್ನಡ ನಾಡಿನ ಭಕ್ತಿಯನ್ನು-ಮೂಲದಲ್ಲಿ ಕೇವಲ ಸಾಲಮಿಸ್ ನಾಡಿನ ಹಾಡಾಗಿದ್ದುದನ್ನು ಸರಾಗವಾಗಿ ಸಹಜವಾಗಿ ತಿರುಗಿಸಿ ಸೃಜಿಸಿದ್ದಾರೆ. ಅಷ್ಟೆ ಅಲ್ಲ, ಮಹಾಭಾರತದ ಪೂರ್ವೋತ್ತರ ಕತೆಯನ್ನು ವಿಸ್ತರಿಸಿ ಹೊಸ ಆಯಾಮ ವಿತ್ತಿದ್ದಾರೆ. ಭಾಷೆಯ ದೃಷ್ಟಿಯಿಂದ ಅನನ್ಯಸಿದ್ಧಿ ತೋರಿದ್ದಾರೆ. ಒಂದೆ ಮಾತು ವಾಕ್ಯವಾಗಿ, ಪ್ರತಿಮೆ ಯಾಗಿ ಕೆಲಸ ಮಾಡುವಂತೆ ಮಾಡಿದ್ದಾರೆ. ಎರಡು ಮಾತಿನಲ್ಲಿ ಇಬ್ಬರ ಮಾತನ್ನಡಗಿಸಿದ್ದಾರೆ. ನಾಟ್ಯಲಯ ವೆಂದರೇನೆಂಬುದನ್ನು ಅದ್ವಿತೀಯವಾಗಿ ಮೆರೆದಿದ್ದಾರೆ. ಮೂಲ ಏಜಾಕ್ಸ್ ನಾಟಕದ ಇತಿಮಿತಿಯನ್ನೂ ಅತಿಯನ್ನೂ ಒತ್ತರಿಸಿ ಒಂದು ಸಾವಿರ ಪಂಕ್ತಿಯಲ್ಲೆ ಒಂದು ಕಲಾ ಗೋಪುರವನ್ನು ನಿರ್ಮಿಸಿದ್ದಾರೆ. (ಷೇಕ್ಸ್‌ಪಿಯರ್ ಮಹಾ ಕವಿಯ ಮ್ಯಾಕ್ಬೆತ್ ನಾಟಕ ಎರಡು ಸಾವಿರ ಪಂಕ್ತಿ) ವಸ್ತುಸಂಬಂಧವಾದ ಇದರ ಓರೆಕೋರೆಗೆ ಎರಡು ಕತೆ ಗಳ ಭಿನ್ನ ಮೂಲ ಕಾರಣವಷ್ಟೆ ಹೊರತು ಈ ಸೃಷ್ಟಿ ಯಲ್ಲಿ. ಇವರು ಮೆರೆದಿರುವ ಭಾಷಾ ಸಿದ್ಧಿಯನ್ನು ನಾನು ಓದಿದ ಯಾವ ನಾಲ್ಕಾರು ಇಂಗ್ಲಿಷ್ ಅನುವಾದಕನೊ ತೋರಿಲ್ಲವೆಂದರೆ ಹೆಮ್ಮೆಯಾಗದಿರದು. ಉದಾಹರಣೆಗಾಗಿ ಕೆಲಪಂಕ್ತಿಗಳನ್ನು ಉದ್ಧರಿಸುವೆ.

i) The man of merit
Once he be dead, it is ill done
to harm,
However you may hate him."

ii) " It is not righteousness to outrage
A braveman dead, not even thou
you hate him."

iii) " Even if you hate him, it is
against all justice
To lift your hand against
a good man dead. "

iv) " No hatred should have scope
To offend the noble spirits
of the dead."

v) " ಕಲಿ ಸಾಯೆ, ಪಗೆಗಳುಂ
ಪೊಗಟ್ಟುವದದು ಶೀಲಂ-ನೋಯಿಸುವುದಲ್ತು."

ಇಲ್ಲಿ ಉದ್ಧರಿಸಿರುವ ವಾಕ್ಯಗಳ ಭಾಷಾ ಸಿದ್ಧಿ ತಿಳಿದೀತು. ಅದರಲ್ಲಿ ಒತ್ತಕ್ಷರದಲ್ಲಿ ತೋರಿರುವ ಭಿನ್ನ ಪದಗಳಿಗೆ ಮೂಲ ನಾಟಕದಲ್ಲಿ 'Esthlos' ಎಂಬ ಪದ ವಿದೆ. ಇದೆ ಪದವನ್ನು ಸಾಫೋಕ್ಲಿಸ್ ಕವಿ ಮೂರು ಕಡೆ ಬೇಕೆಂದೆ ಏಜಾಕ್ಸ್ ಸಂಬಂಧವಾದ ವಿಶೇಷಣವಾಗಿ ಬಳಸಿದ್ದಾನೆಂದು, ಏಜಾಕ್ಸ್ ಅನುವಾದಕ Sir George young ತನ್ನ ಅನುವಾದದ ಟಿಪ್ಪಣಿಯಲ್ಲಿ ಒತ್ತಿ ಹೇಳು ತ್ತಾನೆ. ಆ ಪದಕ್ಕೆ ನಿಘಂಟುವಿನಲ್ಲಿರುವ ಅರ್ಥ ಇಷ್ಟು. good of kind ; good ; bold ; stout ; wealthy ; rich ; noble. ಹೋಮರ್ ಕವಿಯಲ್ಲಿ Wealthy, rich ಎಂಬರ್ಥದಲ್ಲಿ ಬಳಕೆಯಾಗಿದೆಯೆಂದು ಅದೇ ನಿಘಂಟು ಹೇಳುತ್ತದೆ. . . ಹೋಗಲಿ ಮೇಲೆ ಉದ್ಧರಿಸಿರುವ ಭಿನ್ನ ಪಂಕ್ತಿಗಳಲ್ಲಿ ಯಾರು ಸತ್ತ್ವ ಸಂಪನ್ನರೆಂದು ತೋರುತ್ತೆ ?

[೨೭ನೇ ಪುಟ ನೋಡಿ]



# ' ಶ್ರೀ ' ಯವರು ನಮ್ಮವರಾದರು

※ ಎಸ್. ವಿ. ರಂಗಣ್ಣ

ಬಿ. ಎಂ. ಶ್ರೀಕಂಠಯ್ಯನವರನ್ನು ನಾನು ಸಂದರ್ಶಿಸಿದುದು ಅವರ ಇಳಿವಯಸ್ಸಿನಲ್ಲೇ. ಆದ್ದರಿಂದ ಗಾಂಭೀರ್ಯ ಅವರ ಹುಟ್ಟುಗುಣ, ಲಘು ಚರ್ಯೆ ಅವರಿಗೆ ಗೊತ್ತೇ ಇಲ್ಲ ಎಂಬ ಅಭಿಪ್ರಾಯ ನನ್ನಲ್ಲಿ ಮೂಡಿತ್ತು. ಆದರೆ ಅವರ ಬಾಲ್ಯಪೂರ್ವ ಯೌವನಗಳ ಚರಿತ್ರೆಯನ್ನು ಬಲ್ಲವರಿಂದ ತಿಳಿದುಕೊಂಡ ತರುವಾಯ ಅವರೂ ಎಲ್ಲ ಮನುಷ್ಯರ ತರಹವೇ ಎಂಬುದು ಖಚಿತವಾಯ್ತು. ಚಿಕ್ಕವರಾಗಿದ್ದಾಗ ಅವರೂ ಸಹಪಾಠಿಗಳೊಂದಿಗೆ ಹುಡುಗಾಟ ಕೀಟಲೆ ಚೇಷ್ಟೆಗಳಲ್ಲಿ ನಿರತರಾಗುತ್ತಿದ್ದರು, ವಿನೋದಪಡುತ್ತಿದ್ದರು. ಮಿದ್ದೆ ಮನೆಗಳ ಮೇಲಕ್ಕೆ ಹತ್ತಿ ಗವಾಕ್ಷಿಯಿಂದ ಮಣ್ಣು ಸುರಿಯುವುದು, ಹಳ್ಳಿ ಹೆಂಗಸರು ಹೊತ್ತು ತರುತ್ತಿದ್ದ ಮಡಕೆಗಳಿಗೆ ಕಲ್ಲುಬೀರಿ ಹೊಡೆಯುವುದು, ತೋಟಗಳಿಗೆ ನುಗ್ಗಿ ಹಣ್ಣು ಹಂಪಲು ಕದಿಯುವುದು ಇತ್ಯಾದಿ ತುಂಟತನದಲ್ಲಿ ಅವರು ಪಾಲ್ಗೊಳ್ಳುತ್ತಿದ್ದರು ಉಲ್ಲಾಸದಿಂದ. ಸೋದರಮಾವ ಛಾಯಾಪತಿ ಶಾಸ್ತ್ರಿಗಳಿಂದ ಏಟುಗಳನ್ನೂ ತಿನ್ನುತ್ತಿದ್ದರು. ಪಡ್ಡೆ ಹುಡುಗರ ಒಂದು ಗುಂಪೇ ಇದ್ದಂತೆ ತೋರುತ್ತದೆ; ಅದರ ಮುಖಂಡನಿಗೆ ಪುಂಡಾಮಾವ ಎಂಬ ಅಂಕಿತ ಇದ್ದಿತಂತೆ. ಅವನ ನೇತೃತ್ವದಲ್ಲಿ ಹೂಡುತ್ತಿದ್ದ ಚೆಲ್ಲಾಟಗಳಿಗೆ ಸ್ಪಷ್ಟವಾದ ನಾವೀನ್ಯವೇ ಲಕ್ಷಣವಾಗಿತ್ತು. ಒಮ್ಮೆ ಅವರೆಲ್ಲ ಸೇರಿ " ದೇವರ ಆಟ " ಆಡಬೇಕೆಂದು ನಿರ್ಧರಿಸಿದರು. ಯಾರು ದೇವರಾಗಬೇಕು ? ಪುಂಡಾಮಾವ ನಲ್ಲದೆ ಮತ್ತಾರು !

ಸರಿ. ಮೊದಲು ದೇವರನ್ನು ಎಚ್ಚರಿಕೆಯಿಂದ ಸ್ಥಾಪಿಸಬೇಕು ತಾನೆ, ಮರಳು ಜಾಗದಲ್ಲಿ ಆಳವಾದ ಗುಂಡಿಯೊಂದನ್ನು ತೋಡಿದರು. ಪುಂಡಾಮಾವನನ್ನು ಅದರೊಳಕ್ಕೆ ಇಳಿಸಿ, ಕತ್ತಿನವರೆಗೂ ಮರಳನ್ನು ಸುರಿದು ಮುಚ್ಚಿ, ತಲೆಯೊಂದು ಮಾತ್ರ ಹೊರಗಿರುವಂತೆ ನಿಯೋಜಿಸಿದರು. ಎಲ್ಲವನ್ನೂ ಸಿದ್ಧಗೊಳಿಸಿ, ದೇವರ ಆರಾಧನೆಗೆ ಹೂವು ಹಣ್ಣು ಕಾಯಿ ಕೊಂಡುತರಲು ಪೇಟೆಗೆ ಹೊರಟರು. ಸ್ವಲ್ಪ ಹೊತ್ತಾದ ನಂತರ ಪುಂಡಾಮಾವನ ಸ್ಥಿತಿ ಸಂಕಟಮಯವಾಯ್ತು. ಕೈಕಾಲು ಯಾವುದನ್ನೂ ಆಡಿಸು ವಂತಿಲ್ಲ, ಬರಿ ತಲೆಯನ್ನು ಕೊಂಚ ಅತ್ತಿತ್ತ ಅಲುಗಿಸ ಬಹುದಾಗಿತ್ತು. ಮಾತನಾಡಲೂ ಕಿರಿಚಿಕೊಳ್ಳಲೂ ಸ್ವಲ್ಪ ಸ್ವಲ್ಪ ಮಾತ್ರ ಆಸ್ಪದವಿತ್ತು ; ಅದೂ ಕೆಲವೇ ನಿಮಿಷಗಳ ಮಾತ್ರ. ಶಿಖೆ ಬೆವರು ಸುಸ್ತುಗಳಿಂದ ಅವನು ಕಂಗಾಲಾಗಿ ಹೋದ. ಆ ಕಡೆ ನುಸುಳಿಬಂದ ಯಾರೋ ಪುಣ್ಯಾತ್ಮರು ಆ ವಿಚಿತ್ರ ದೃಶ್ಯವನ್ನು ಈಕ್ಷಿಸಿ, ತಕ್ಷಣ ಮರಳನ್ನೆಲ್ಲ ಆಚೆಗೆ ಎತ್ತಿ ತೆಗೆದು, ಬಸವಳಿದಿದ್ದ ಬಾಲಕನನ್ನು ಸಂರಕ್ಷಿಸಿದರು. ಇನ್ನು ಕೊಂಚವೇ ತಡವಾಗಿದ್ದರೆ ಪುಂಡಾಮಾವ ದಿಟ ವಾಗಿ ದೇವರ ಪಾದವನ್ನೇ ಸೇರಿಬಿಡುತ್ತಿದ್ದ. ಹುಡುಗಾಟ ಹೋಗಿ ದೊಡ್ಡಾಟ ಆಗಿಬಿಡುತ್ತಿತ್ತು.

ನನಗಾದ ಇನ್ನೊಂದು ಅನುಭವವೂ ಉಲ್ಲೇಖ ನೀಯ. ಕೆಲವು ವರ್ಷಗಳ ಹಿಂದೆ ರಾಯಚೂರಿನಲ್ಲಿ ಕನ್ನಡ

ಸಾಹಿತ್ಯ ಸಮ್ಮೇಳನ ನಡೆಯಿತು. ಆಗ ರಾಯಚೂರು ಇನ್ನೂ ನೈಜಾಮರ ಆಳ್ವಿಕೆಗೇ ಸೇರಿತ್ತು. ಕರ್ನಾಟಕ ರಾಜ್ಯ ಇನ್ನೂ ಹಂಚಿ ಹರಿದವ್ವೇ ಆಗಿತ್ತು. ಊರಿನ ನಗರೇಶ್ವರ ದೇವಸ್ಥಾನದ ಹೊರವಲಯದಲ್ಲೇ ಸಮ್ಮೇಳನಕ್ಕೆ ಹೋದ ವರಿಗೆ ಬಿಡಾರ ಗೊತ್ತುಮಾಡಲಾಗಿತ್ತು. ಅದೆಂಥ ಊರು ! ರಸ್ತೆಗಳು ಇಕ್ಕಟ್ಟಿನವು, ನಲ್ಲಿ ಕಕ್ಕಸು ಯಾವುದೂ ಇಲ್ಲ. ಮೈಸೂರು-ಬೆಂಗಳೂರಿನವರಾದ ನಮಗೆ ಬಹಳ ಮುಜುಗರವಾಯ್ತು. ದೇವರ ದಯದಿಂದ ನಮಗೆ ಬೇರೊಂದು ಒಳ್ಳೆಯ ವಸತಿ ಸಿಕ್ಕಿತು. ಕೃಷಿ ವಿಸ್ತರಣಾ ಯೋಜನೆಗೆ ಸಂಬಂಧಿಸಿದಂತೆ ಬಡಾವಣೆಯೊಂದರಲ್ಲಿ ಹೊಸ ಗೃಹಗಳನ್ನು ಕಟ್ಟಿದ್ದರು. ದೊಡ್ಡದಾದ ಒಂದರಲ್ಲಿ ನಮಗೆ ಜಾಗ ಮಾಡಿಕೊಡಲು ಮೈಸೂರಿನವರೇ ಆದ ಮುಖ್ಯಾಧಿಕಾರಿ ಉದಾರ ಮನಸ್ಸು ಮಾಡಿದರು. ಅಲ್ಲಿಂದ ಊರಿನೊಳಗಿನ ನಾಟಕಮಂದಿರಕ್ಕೆ ಹೋಗಿ ಬರಲು ಒಂದು ಕೆಂಪುಬಣ್ಣದ ಬಸ್ಸು ಕೂಡ ಒದಗಿಬಂತು- ಸಮ್ಮೇಳನಕ್ಕೆ ಆಗಮಿಸಿದ್ದ ಇತರರು ಅದನ್ನು " ರೆಡ್ ವ್ಯಾಕ್ಸ್‌ವೆಲ್ " ಎಂದು ಪರಿಹಾಸ ಮಾಡಿದರು. ಅದೂ ಒಂದು ಕಥೆ. ಆಗ್ಗೆ ಕೆಲವು ದಿವಸಗಳ ಹಿಂದೆ ಯಾವುದೋ ಒಂದು ಘೋರ ಕೊಲೆಗೆ ಪಾತಕಿಗಳು "ರೆಡ್ ವ್ಯಾಕ್ಸ್‌ವೆಲ್ " ವಾಹನವನ್ನು ಬಳಸಿಕೊಂಡಿದ್ದರು ! ಅದೆಂಥಾದರೂ ಇರಲಿ, ನಮಗೆ ಒಳ್ಳೆಯ ಬಿಡಾರವೇ ಅನುಕೂಲಿಸಿತು, ಸಮ್ಮೇಳನ ನಮ್ಮ ಪಾಲಿಗೆ ನಿರಾತಂಕವೂ ಸುಖಕರವೂ ಆಯ್ತು !

ಒಬ್ಬೊಬ್ಬರಾಗಿ ಸ್ನಾನ ಮಾಡುವುದಕ್ಕೆ ತಕ್ಕಷ್ಟು ವಿಳಂಬವಾಗುತ್ತಿತ್ತು ; ಒಂದೇ ಬಾಯ್ಲರ್ ; ತಿರುತಿರುಗಿ ನೀರು ತುಂಬಿ ಕಾಯಿಸಬೇಕಾಗಿದ್ದುದರಿಂದ ಹಲವರು ನಡು ಮನೆಯಲ್ಲೊ ಪಕ್ಕದ ಕೊಠಡಿಯಲ್ಲೋ ಕಾದು ನಿಂತಿರುತ್ತಿದ್ದರು. ಒಂದು ಬೆಳಗ್ಗೆ ನಾವು ಕೆಲವರು ಹಜಾರದಲ್ಲಿ ಕಾಯುತ್ತಿದ್ದೆವು ಮಗ್ಗುಲಿನ ಕೋಣೆಯಲ್ಲಿ ಶ್ರೀಯವರೂ ಆಲೂರ ವೆಂಕಟರಾಯರೂ ಇನ್ನೊಬ್ಬ ಹಿರಿಯರೂ ನಿಂತು ಕೊಂಡು ಮಾತುಕಥೆ ಆಡುತ್ತಿದ್ದರು.ಇದ್ದಕ್ಕಿದ್ದಂತೆ "ಅಚ್ಯುತ ರಾಯರು ಚುಚ್ಚುತ ಬಂದರು. ಬಿಚ್ಚಿರಿ ರವಿಕೆಗಳ ! " ಎಂಬ ವಾಕ್ಯ ಕಿವಿಕಟ್ಟಿ ನಮ್ಮನ್ನು ಆಶ್ಚರ್ಯದಲ್ಲಿ ಮುಳುಗಿಸಿತು. ಅದನ್ನು ಆಡುತ್ತಿದ್ದವರು ಬೇರೆ ಯಾರೂ ಅಲ್ಲ, ಸ್ವತಃ ಶ್ರೀಯವರೇ ! ಪ್ಲೇಗು ಕಾಹಿಲೆ ವೊಟ್ಟಮೊದಲಾಗಿ ಬಂದಾಗ ಅಚ್ಯುತರಾಯರೆಂಬುವರು ಮುಖ್ಯ ವೈದ್ಯಾಧಿಕಾರಿಯಾಗಿದ್ದರಂತೆ. ಇನಾಕ್ಯುಲೇಶನ್ ಎಂಬ ಚುಚ್ಚು ಮದ್ದಿನ ಉಪಯೋಗ ಆಗ ಹಚ್ಚ ಹೊಸತು ; ಸ್ವಯಂ ಮುಖ್ಯ ವೈದ್ಯಾಧಿಕಾರಿಗಳೇ ಎಷ್ಟೋ ಜನರಿಗೆ ಹಾಕುತ್ತಿದ್ದರು. ಪುಂಡ ಮಂದಿ ಸುಮ್ಮನೆ ಇರುತ್ತಾರೆಯೆ. ಲಾವಣಿ ಕಟ್ಟಿ ಹಾಡತೊಡಗಿದರು. ಆ ಹೊತ್ತು ಶ್ರೀಯವರು ಇನ್ನೂ ಕೆಲವು ಮಾತನ್ನಾಡಿದರು, ಅವುಗಳನ್ನು ಮರೆಯುವಂತಿಲ್ಲ. "ಕೊಚ್ಚೆಯಲ್ಲಿ ರೊಚ್ಚಿನ ಗುಂಡಿಯಲ್ಲಿ ಬಿದ್ದಿರಿ ಬೆಚ್ಚಗೆ "—ಇತ್ಯಾದಿ ಇತ್ಯಾದಿ. ಹೀಗೆ ಹೋಗುತ್ತಿದ್ದುವು ವಾಕ್ಯಗಳು ; ಏನು ಮಾಡುವುದು ಮರೆತುಹೋಗಿವೆ ! "

ಈ ಅನುಭವದಿಂದ ನಮಗೆ ಶ್ರೀಯವರ ವಿಚಾರದಲ್ಲಿ ಬರಿ ಗೌರವದ ಜೊತೆಗೆ ಮಾನವಿಕ ಪ್ರೀತಿ ವಿಶ್ವಾಸಗಳೂ ಉಕ್ಕಿಬಂದುವು. "ಅವರೂ ಮನುಷ್ಯರೆ, ಮನುಷ್ಯರ ಸಹಜವಾದ ವಿನೋದ ಅವರಿಗೂ ಅಗತ್ಯವಾಗಿತ್ತು; ಅದನ್ನು ತಮ್ಮದೇ ಆದ ರೀತಿಯಲ್ಲಿ ಗಳಿಸಿಕೊಳ್ಳುತ್ತಿದ್ದರು ! " ಎಂಬ ನಂಬಿಕೆಯಿಂದ ಆತ್ಮೀಯತೆ ವೆಗ್ಗಳವಾಯ್ತು. ಶ್ರೀಯವರು ನಮ್ಮವರಾದರು !

---

[೨೫ನೇ ಪುಟದಿಂದ]

ಕನ್ನಡ ನುಡಿಗಟ್ಟಿನ ಮೇಲೆ ಹಿಡಿತವಿರುವ ಇಂಗ್ಲಿಷ್ ಪ್ರಾಧ್ಯಾಪಕರಾಗಿರುವವರು ಇತ್ತೀಚೆಗೆ ಕನ್ನಡ ಕಾವ್ಯ ಸಿದ್ಧಿಗಳಿಸುತ್ತಿರುವ ಈ ದಿನದಲ್ಲೂ ಅವರಲ್ಲಿ ಇವರನ್ನು ಸರಿಗಟ್ಟುವ ಹಳಗನ್ನಡ ಕಾವ್ಯಸತ್ತ್ವ ತಿಳಿದ ದ್ರಾವಿಡ ಭಾಷೆ-ಛಂದಸ್ಸುಗಳ ವಿದ್ವತ್ತಿರುವ ಮತ್ತೊಬ್ಬರಿಲ್ಲ ಎಂಬುದನ್ನು ತಿಳಿಯಬಹುದು. ಇವರು ಹೋಮರ್ ಮಹಾಕವಿಯ ಇಲಿಯಡ್ ಕಾವ್ಯಾನುವಾದವನ್ನು ಅದೇ ಬಗೆಯ ಛಂದಸ್ಸಿನಲ್ಲಿ ಮಾಡಿದ್ದುದಾಗಿಯೂ ಅದು ಕಟ್ಟಿಟ್ಟೆಡೆಯೆ ಗೆದ್ದಲಿಗೆ ಆಹುತಿಯಾಗಿತ್ತೆಂದೂ ಅದನ್ನು ಕಂಡು ಶ್ರೀ ಅವರು ಕಣ್ಣೀರಿಟ್ಟರೆಂದೂ ಪ್ರೊ|| ಡಿ. ಎಲ್. ಎನ್. ನನಗೆ ಹೇಳಿದ್ದರು. ಅಶ್ವತ್ಥಾಮನ್ ಭಾಷಾ ಸಿದ್ಧಿ ಛಂದೋನಾವೀನ್ಯ ನೋಡಿದವನಿಗೆ ಆ ನಷ್ಟದಿಂದ ಕನ್ನಡಕ್ಕೆ ಎಂಥ ದೀರ್ಘ ನಷ್ಟವಾಯಿತೆಂಬ ವಿಷಾದವಿದೆ.

ಈ ಎಲ್ಲ ದೃಷ್ಟಿಯಿಂದ ಶ್ರೀಯವರ ಕೊಡುಗೆಯನ್ನು ಮತ್ತೆ ಒರೆಹಚ್ಚಬೇಕಾದ ಕಾಲವೀಗ ಬಂದಿದೆ.

# ಪರಿಷತ್ತನ್ನು ಬೆಳೆಸಿದ ಬಿ. ಎಂ. ಶ್ರೀ.

* ಪ್ರಾ|| ಎಂ. ವಿ. ಸೀತಾರಾಮಯ

ಪರಿಷತ್ತಿನ ಬೆಳವಣಿಗೆಗೆ ಹೊಸ ತಿರುವು ಕೊಟ್ಟ ಡಿ. ವಿ. ಜಿ. ಅವರ ಕಾಲದಲ್ಲಿ ಪರಿಷತ್ತಿನ ಪ್ರತಿಷ್ಠೆ ಹೆಚ್ಚಿದರೂ ಅದರ ಬಗ್ಗೆ ಉತ್ತರ ಕರ್ನಾಟಕದವರು ಅಷ್ಟೇನೂ ಅಕ್ಕರೆ ಆಸ್ಥೆಯುಳ್ಳವರಾಗಿರಲಿಲ್ಲ. ವಾಸ್ತವವಾಗಿ, ಉತ್ತರ ಕರ್ನಾಟಕದವರು ಆಲೂರ ವೆಂಕಟರಾಯರ ಮುಖಂಡತ್ವದಲ್ಲಿ ಪರಿಷತ್ತಿನ ಶಾಖೆಯೊಂದು ಧಾರವಾಡದಲ್ಲಿ ಇರಬೇಕು ಎಂದು ಒತ್ತಾಯ ಮಾಡಿದಾಗ ಅದಕ್ಕೆ ತಮ್ಮ ಬೆಂಬಲ ಕೊಡಲಿಲ್ಲ. ಪರಿಷತ್ತು ಇಬ್ಭಾಗವಾಗುತ್ತದೆ ಎಂದು ಅವರು ಶಂಕೆ ಹೊಂದಿದರು. ಕರ್ನಾಟಕ ಏಕೀಕರಣದ ಬಗೆಗೂ ಅವರ ನಿಲುವು (ಹಳೆಯ) ಮೈಸೂರಿನ ವಿಶಿಷ್ಟ ಪ್ರತ್ಯೇಕತೆಯನ್ನು ಉಳಿಸಿಕೊಳ್ಳುವುದರ ಕಡೆಗೆ ಇದ್ದಿತು. ಹೀಗಿದ್ದೂ ಬಿ. ಎಂ. ಶ್ರೀ. ಅವರ ಬಗೆಗೆ ಅವರ ಅಭಿಮಾನ, ಗೌರವ ಅಪಾರ. ಜಮುಖಂಡಿಯ ಸಾಹಿತ್ಯ ಸಮ್ಮೇಳನದ ಸಮಯದಲ್ಲಿ ನಡೆದ ವಾರ್ಷಿಕಾಧಿವೇಶನದಲ್ಲಿ ಡಿ. ವಿ. ಜಿ. ಅವರು ಉಪಾಧ್ಯಕ್ಷರಾಗಿ ಮುಂದುವರಿಯುವುದು ತಮಗೆ ಇನ್ನು ಸಾಧ್ಯವಿಲ್ಲವೆಂದು ಸೂಚಿಸಿದಾಗ, ಬಿ. ಎಂ. ಶ್ರೀ ಅವರ ಶಿಷ್ಯರೂ ಅಭಿಮಾನಿಗಳೂ "ಶ್ರೀ" ಯವರ ಹೆಸರನ್ನು ಉಪಾಧ್ಯಕ್ಷ ಸ್ಥಾನಕ್ಕೆ ಸೂಚಿಸಿದರು. ಬಿ. ಎಂ. ಶ್ರೀ
ಸರ್ವಾನುಮತದಿಂದ ಪರಿಷತ್ತಿನ ಉಪಾಧ್ಯಕ್ಷರಾಗಿ ಆಯೆ
ಯಾದರು.

## ಉಪಾಧ್ಯಕ್ಷ ಬಿ. ಎಂ. ಶ್ರೀ.

ಪರಿಷತ್ತಿನ ಉಪಾಧ್ಯಕ್ಷರಾಗಿ ಬಿ. ಎಂ. ಶ್ರೀ
ಪರಿಷತ್ತಿಗಾಗಿ, ಕನ್ನಡಕ್ಕಾಗಿ ಮಾಡಿದ ಸಾಧನೆಯ
ಮಹತ್ವನ್ನು ಅರಿಯಬೇಕಾದರೆ ಅವರಿಗಿಂತ ಹಿಂದೆ ಇದ
ವರು ಸಾಧಿಸಿದ್ದು ಏನು, ಎಷ್ಟು ಎನ್ನುವುದನ್ನು ತಿಳಿಂ
ಬೇಕಾದದ್ದು ಅಗತ್ಯ ಎಂಬ ಅಭಿಪ್ರಾಯದಿಂದ 'ಹಿನ್ನೆಲೆ
ಯನ್ನು ಸ್ವಲ್ಪ ವಿವರಪೂರ್ಣವಾಗಿ ಪರಿಚಯಮಾಡಿಕೊ
ಬೇಕಾಯಿತು. ಶ್ರೀಯವರ ಮಾರ್ಗದರ್ಶನ, ಸ್ಫೂರ್ತಿ
ಮತ್ತು ಪ್ರೇರಣೆಗಳಿಂದ ಅವರ ಅಧಿಕಾರಾವಧಿಯಲ್ಲಿ ನಡೆ
ಅತ್ಯಂತ ಪ್ರಮುಖ ಕಾರ್ಯಗಳನ್ನು ಮುಂದೆ ಒಕ್ಕಣಿ
ಲಾಗುವುದು. ಈ ಅವಧಿಯಲ್ಲಿ ಮೈಸೂರಿನಿಂ
ಬೆಂಗಳೂರಿಗೆ ವರ್ಗವಾಗಿ, ಸೆಂಟ್ರಲ್ ಕಾಲೇಜಿನಲ್ಲಿ ಆಂ
ಭಾಷಾ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದರ

ಆದ್ದರಿಂದ ಅವರು ಡಿ. ವಿ. ಜಿ. ಅವರಂತೆ ಪರಿಷತ್ತಿನಲ್ಲಿ ಪ್ರತಿನಿತ್ಯ ಬಂದು ಕುಳಿತು ದಿನನಿತ್ಯದ ಕೆಲಸವನ್ನು ನೋಡಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಅದರ ಅಗತ್ಯವೂ ಇರಲಿಲ್ಲ. ಏಕೆಂದರೆ, ಡಿ. ವಿ. ಜಿ. ಅವರ ಕಾಲದಲ್ಲಿ ಕೆಲಸ ಮಾಡಿ ಅನುಭವ ಪಡೆದ ಕಚೇರಿ ಸಿಬ್ಬಂದಿ ಹಾಗೂ ಗೌರವ ಪದಾಧಿಕಾರಿಗಳು ಬಿ. ಎಂ. ಶ್ರೀ. ಅವರ ನೆರವಿಗೆ ನಿಂತಿದ್ದರು. ಬಿ. ಎಂ. ಶ್ರೀ. ದಿನನಿತ್ಯ ಕಛೇರಿ ಕೆಲಸವನ್ನು ಸಿಬ್ಬಂದಿ ನೋಡಿಕೊಳ್ಳಲು ಬಿಟ್ಟು, ಡಿ. ವಿ. ಜಿ. ಪ್ರಾರಂಭಿಸಿ ವ್ಯವಸ್ಥೆಗೊಳಿಸಿದ್ದ ಗಮಕ ಶಿಕ್ಷಣ ತರಗತಿ, ವಸಂತ ಸಾಹಿತ್ಯೋತ್ಸವಗಳನ್ನು ಮುಂದುವರಿಸಿದ್ದಲ್ಲದೆ, ಪರಿಷತ್ತಿನ ಕಾರ್ಯ ವ್ಯಾಪ್ತಿಯನ್ನು, ದೃಷ್ಟಿಯನ್ನು ಎದ್ದು ಕಾಣುವಂತೆ ಮಾರ್ಪಡಿಸಿದರು. ಅವರು ಮಾಡಿದ ಮಾರ್ಪಾಡುಗಳನ್ನು ಪರಿಷತ್ತಿಗೆ ಹೊಸ ಚೇತನ ತಂದ ಮಹತ್ವದ ಕಾರ್ಯಗಳನ್ನೂ ಈ ಮುಂದೆ ಬಹಳ ಸಂಕ್ಷೇಪವಾಗಿ ವಿವರಿಸಿದೆ :

೧. **ಪರಿಷತ್ತಿನ ಹೆಸರಿನ ಮಾರ್ಪಾಟು :** ಪರಿಷತ್ತು ಸ್ಥಾಪನೆ ಆದಂದಿನಿಂದ ಅದರ ನಿಯಮಾವಳಿಯಲ್ಲಿ ಘೋಷಿತವಾಗಿ, ಅದರ ಎಲ್ಲ ಪ್ರಕಟನೆ ಪತ್ರ ಶಿರೋಲೇಖ (letter–head)ಗಳಲ್ಲಿ ಕಾಣುತ್ತಿದ್ದುದು 'ಕರ್ಣಾಟಕ ಸಾಹಿತ್ಯ ಪರಿಷತ್ತು' ಎಂದು. ಎ. ಆರ್. ಕೃ. ಅವರು ಮೈಸೂರಿಗೆ ವರ್ಗವಾಗಿ, ಅವರ ಸಂಪಾದಕತ್ವದಲ್ಲಿ ಹೊರಬರುತ್ತಿದ್ದ ಪರಿಷತ್ಪತ್ರಿಕೆಯನ್ನು ಸಂಪಾದಕರ ಪರವಾಗಿ ನಿರ್ವಹಿಸುವ ಪೂರ್ಣ ಹೊಣೆಗಾರಿಕೆ ನನ್ನ ಮೇಲೆ ಬಿದ್ದಿತು. ೧೯೩೭ರ ಪ್ರಥಮ ಸಂಚಿಕೆಯ ಮುಖ ಪುಟವನ್ನೂ ಹೊದಿಕೆ ಪುಟವನ್ನೂ ಮುದ್ರಿಸುವ ಸಂದರ್ಭದಲ್ಲಿ ಬಿ. ಎಂ. ಶ್ರೀ. ನಮಗೆ ಎಂ.ಎ. ತರಗತಿಯಲ್ಲಿ ಪಾಠ ಮಾಡುವಾಗ, ಕನ್ನಡ–ಕರ್ಣಾಟಕ–ಕರ್ನಾಟಕ ಶಬ್ದರೂಪಗಳ ಬಗೆಗೆ ಅತ್ಯಂತ ವಿಚಾರಪೂರ್ಣವಾಗಿ–ಐತಿಹಾಸಿಕ ದೃಷ್ಟಿಯಿಂದ, ಭಾಷಾಶಾಸ್ತ್ರ ದೃಷ್ಟಿಯಿಂದ, ಕರ್ನಾಟಕ ರೂಪವೇ ಸಾಧು ಎಂದು ಸಾಧಿಸಿ ತೋರಿಸಿದ್ದರು. ಇದು ನೆನಪಿಗೆ ಬಂದು, ಒಂದು ಅಕ್ಷರವನ್ನು ತಿದ್ದುವುದು ಒಂದು ಸಣ್ಣ ಬದಲಾವಣೆ ಎಂದು ತೋರಿದರೂ ಉಪಾಧ್ಯಕ್ಷರ ಗಮನಕ್ಕೆ ತರುವುದು ಒಳ್ಳೆಯದು ಎಂದು ಭಾವಿಸಿ ಹೊದಿಕೆ ಪುಟವನ್ನು ಬಿ. ಎಂ. ಶ್ರೀ. ಅವರಿಗೆ ಕಳಿಸಿಕೊಟ್ಟೆನು. ಅವರು ಬದಲಾವಣೆಯನ್ನು ಗಮನಿಸಿ, BMS ಎಂದು ತಮ್ಮ ಸಂಕ್ಷಿಪ್ತ ಸಹಿಯನ್ನು ಹಾಕುವ ಮೂಲಕ ಅದನ್ನು ಒಪ್ಪಿ ಹಿಂದಿರುಗಿಸಿದರು. ಈ ಬದಲಾವಣೆ ಅವರಿಗೆ ಸರಿ ಕಂಡದ್ದರಿಂದಲೇ ಅದು ಆದ ತರುಣದಲ್ಲೆ ಬಂದ ವಸಂತ ಸಾಹಿತ್ಯೋತ್ಸವ ಸಂದರ್ಭದಲ್ಲಿ ಪರಿಷತ್ತಿನ ಕಟ್ಟಡದ ಮುಖಮಂಟಪದ ಮೇಲೆ ರಾತ್ರಿಯ ವೇಳೆಯೂ ಚೆನ್ನಾಗಿ ಪರಿಷತ್ತಿನ ಹೆಸರು ಎಲ್ಲರ ಕಣ್ಣಿಗೂ ಬೀಳಲಿ ಎಂಬ ಘನ ಉದ್ದೇಶದಿಂದ 'ಬಳ್ಳಿಬೆಳಕಿನ' (ನಿಯಾನ್) ಅಕ್ಷರಗಳುಳ್ಳ ನಾಮಫಲಕವನ್ನು ಸುಮಾರು ೩೫೦ರೂಪಾಯಿ ಮುಟ್ಟಿಸಿ ಸ್ವಂತ ವೆಚ್ಚದಿಂದ ಮಾಡಿಸಿದರು. ಪ್ರೊ|| ಎ. ಎನ್. ಮೂರ್ತಿರಾಯರು 'ಬಿ. ಎಂ. ಶ್ರೀಕಂಠಯ್ಯ' ಎಂಬ ತಮ್ಮ ಪುಸ್ತಕದಲ್ಲಿ ಸೂಚಿಸಿರುವಂತೆ —"ಕರ್ಣಾಟಕ ಸಾಹಿತ್ಯ ಪರಿಷತ್ತು ಎಂಬ ಹೆಸರನ್ನು ನಿಯಾನ್ ಅಕ್ಷರಗಳಲ್ಲಿ ಪ್ರದರ್ಶಿಸುವ ಅನುಕೂಲಕ್ಕಾಗಿ ಶ್ರೀಕಂಠಯ್ಯನವರು 'ಕರ್ಣಾಟಕ' ಎಂಬ ಪದದಲ್ಲಿರುವ 'ಟ' ವರ್ಗದ ಪಂಚಮಾಕ್ಷರಕ್ಕೆ ಬದಲಾಗಿ 'ತ' ವರ್ಗದ ಪಂಚಮಾಕ್ಷರವನ್ನು ಉಪಯೋಗಿಸಲು ಪ್ರಯತ್ನಿಸಿದ್ದು" ಸಂಸ್ಕೃತ ಪಕ್ಷಪಾತಿಗಳ ವಿರೋಧವನ್ನು ಕಟ್ಟಿಕೊಳ್ಳಲು ನಿಜವಾದ ಕಾರಣವಲ್ಲ. ಏಕೆಂದರೆ, ನಿಯಾನ್ ಅಕ್ಷರಫಲಕ ನಿರ್ಮಾಪಕನಿಗೆ 'ಕರ್ಣಾಟಕ'ದಲ್ಲಿಯ 'ಟ'ಕಾರ ನಿರ್ಮಿಸುವುದು ಸಾಧ್ಯವಾದರೆ ಆ ಅಕ್ಷರದ ತಲೆಕೆಳಗು ರೂಪಾದ 'ಣ'ಕಾರವೂ ಅಷ್ಟೇ ಸಾಧ್ಯ. ಶ್ರೀಯುತರಿಗೆ ಮಾತ್ರ ಏಕೆ—ಯಾರಿಗೂ ಈವರೆಗೆ ತಿಳಿಯದಿದ್ದ, ತಿಳಿಯಲು ಸಾಧ್ಯವಾಗಿರದಿದ್ದ, ತೆರೆಮರೆಯ ವಿದ್ಯಮಾನ ಮಾರ್ಪಾಟಿಗೆ ಮುಖ್ಯ ಪ್ರೇರಕ. ನಾಮಫಲಕ ನಿರ್ಮಾಣವಷ್ಟೇ ಆಗಿದ್ದರೆ ಪ್ರತಿಭಟನೆಯ ನಾಯಕರಾಗಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಬಹುಶಃ ಸುಮ್ಮನಿದ್ದು ಬಿಡುತ್ತಿದ್ದರು. ಬೆಳ್ಳಾವೆಯವರನ್ನು ಕೆರಳಿಸಿದ್ದು ಪರಿಷತ್ ಪತ್ರಿಕೆಯ ಹೆಸರಿನಲ್ಲಾದ ಬದಲಾವಣೆಯನ್ನು ಕಂಡು. ಮುಂದೆ ಈ ಸಂಬಂಧದಲ್ಲಿ ಎದ್ದ ಬಿರುಗಾಳಿ, ಪರಿಣಾಮವಾಗಿ ಬಳ್ಳಾರಿಯ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ನಡೆದ ಸರ್ವಸದಸ್ಯರ ವಾರ್ಷಿಕಾಧಿವೇಶನದಲ್ಲಿ ಬಹುಮತದಿಂದ 'ಕನ್ನಡ ಸಾಹಿತ್ಯ ಪರಿಷತ್ತು' ಎಂದು ಅಂಗೀಕೃತವಾದದ್ದು, ಎಲ್ಲರೂ ಬಲ್ಲ ವಿಷಯವಾದ್ದರಿಂದ ಅದನ್ನು ಇಲ್ಲಿ ಬೆಳಸುವ ಗೋಜಿಗೆ ಹೋಗುವುದಿಲ್ಲ. ಈ ಸಂಗತಿಗಳಿಗಿಂತ ಹೆಚ್ಚಾಗಿ ಇವು ಬಿ. ಎಂ. ಶ್ರೀ. ಅವರ ಹಾಗೂ ಬೆಳ್ಳಾವೆ ಅವರ ಮೇಲೆ ಅವು ಹೇಗೆ ಬೆಳಕು ಚೆಲ್ಲಿ, ಅವರ ವ್ಯಕ್ತಿತ್ವ ಘನತೆಯನ್ನು ಹೆಚ್ಚಿಸುತ್ತವೆ ಎನ್ನುವುದನ್ನು ನಾವು ಗಮನಿಸಬೇಕು. 'ಅಕ್ಷರ ಬದಲಾವಣೆ ನಾನು ಮಾಡಿದ್ದಲ್ಲ, ಸಿಬ್ಬಂದಿ ಮಾಡಿದ್ದು' ಎಂದು ಹೇಳಿ 'ಶ್ರೀ'ಅವರು ಇಕ್ಕಟ್ಟಿನಿಂದ ಪಾರಾಗಬಹುದಾಗಿತ್ತು. ಅವರು ಹಾಗೆ ಮಾಡಲಿಲ್ಲ. ಈ ಸಂಗತಿಯನ್ನು ನಾನು ಬಹಿರಂಗ ಪಡಿಸದೆಹೋಗಿದ್ದರೆ ಅದು ಅಜ್ಞಾತವಾಗಿಯೆ ಉಳಿದಿರುತ್ತಿತ್ತು. ತಮ್ಮ ಗುರು

ಗಳಾಗಿದ್ದ ಬೆಳ್ಳಾವೆಯವರ ಆರೋಪ ಆಕ್ಷೇಪಗಳಿಗೆ ತಮ್ಮ ತಲೆಕೊಟ್ಟು ಅವರೊಂದಿಗೆ ಸಾರ್ವಜನಿಕ ವಾಗ್ಯುದ್ಧಕ್ಕೆ ನಿಂತರು. ಈ ವಾಗ್ಯುದ್ಧ ನಡೆಯುತ್ತಿದ್ದ ವೇಳೆಯಲ್ಲಿಯೇ ಅದೇ ಕಟ್ಟಡದಲ್ಲಿ ಬೇರೊಂದೆಡೆ ನಡೆಯುತ್ತಿದ್ದ ಇಂಗ್ಲಿಷ್-ಕನ್ನಡ ನಿಘಂಟು ಸಂಪಾದಕ ಮಂಡಲಿಯ ಸಭೆಗಳಲ್ಲಿ ಹಾಜರಿರುತ್ತಿದ್ದು ಬೆಳ್ಳಾವೆಯವರೊಂದಿಗೆ ನಿಘಂಟು ರಚನೆಯಲ್ಲಿ ಕ್ರಿಯಾಬದ್ಧವಾಗಿ ನಗುನಗುತ್ತ ಸಹಕರಿಸುತ್ತಿದ್ದರು. ಅವರು ಮನೆಯಲ್ಲಿ ಮಾಡಿಸಿ ತರಿಸುತ್ತಿದ್ದ ಉಪಾಹಾರವನ್ನು ಸಂತೋಷದಿಂದ ಸ್ವೀಕರಿಸುತ್ತಿದ್ದರು.

೨. ಗ್ರಂಥ ಪ್ರಕಟನೆ: ಪಂಪಭಾರತದ ಪರಿಷ್ಕರಣ ಕಾರ್ಯದಲ್ಲಿ ಬಿ. ಎಂ. ಶ್ರೀ. ಅವರ ಕೈವಾಡ ಗಮನಾರ್ಹವಾಗಿತ್ತು. ಇದು ಅವರು ಉಪಾಧ್ಯಕ್ಷರಾಗಿಲ್ಲದಿದ್ದ ತತ್ಪೂರ್ವದಲ್ಲಿ ನಡೆದದ್ದು. ಆಗಿನ ದಿನಗಳಲ್ಲಿ ಪರಿಷತ್ತು ಪ್ರಾಚೀನ ಹಸ್ತಪ್ರತಿಗಳ ಸಂಗ್ರಹಣ ಪ್ರಕಟನೆಗಳಿಗೆ ವಿಶೇಷ ಗಮನವಿತ್ತಿರಲಿಲ್ಲ. ಅದರ ಭಂಡಾರದಲ್ಲಿ ಹೇಳಿಕೊಳ್ಳುವಂತಹ ಹಸ್ತಪ್ರತಿಗಳೂ ಇರಲಿಲ್ಲ. ಅಲ್ಲದೆ, ಈ ಕಾರ್ಯಕ್ಕಾಗಿಯೇ ಶ್ರಮಿಸುತ್ತಿದ್ದ ಓರಿಯಂಟಲ್ ಲೈಬ್ರರಿ ಇತ್ತು. ಆದ್ದರಿಂದ ಓದುಬಲ್ಲ ಜನಸಾಮಾನ್ಯಕ್ಕೆ ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೆ ಕನ್ನಡ ನಾಡಿನ ಸಾಹಿತ್ಯದ, ಕಲೆಗಳ ಮತ್ತು ಇತಿಹಾಸದ ಪರಿಚಯವನ್ನು ಮಾಡಿಕೊಡುವುದಕ್ಕಾಗಿ 'ಕನ್ನಡ ಬಾವುಟ', 'ಕನ್ನಡ ನಾಡಿನ ಚರಿತ್ರೆ' (ಮೂರು ಭಾಗಗಳು)ಗಳನ್ನು ಸಿದ್ಧಪಡಿಸಿ ಪ್ರಕಟಿಸಿದರು. 'ಕನ್ನಡ ಬಾವುಟ' ಅನೇಕ ಮುದ್ರಣಗಳನ್ನು ಕಂಡಿರುವುದು ಅದರ ಜನಪ್ರಿಯತೆಗೆ ಸಾಕ್ಷಿ.

೩. ಕನ್ನಡ ಬಾವುಟ: ಕನ್ನಡ ಬಾವುಟದ ಕಲ್ಪನೆ ಪೂರ್ತಿಯಾಗಿ 'ಶ್ರೀ' ಅವರದು. ಈ ಕಲ್ಪನೆಯ ಭಾವನಾತ್ಮಕ ಪ್ರತೀಕವಾಗಿ ಕನ್ನಡ ನಾಡಿನ ಭೂಪಟವನ್ನು ಒಳಗೊಂಡಂತೆ ರೇಶಿಮೆ ಬಟ್ಟೆಯಲ್ಲಿ ಒಂದು ಬಾವುಟವನ್ನು ಹೊಲೆಯಿಸಿ ವಸಂತ ಸಾಹಿತ್ಯೋತ್ಸವದಂದು ಮೈಸೂರಿನ ಧ್ವಜದೊಂದಿಗೆ ಅದನ್ನು ಪರಿಷನ್ಮಂದಿರದ ಮೇಲೆ ಏರಿಸಿದ್ದರು. ಆ ಸಂದರ್ಭದಲ್ಲಿ ಪ್ರಕಟವಾದ 'ಕನ್ನಡ ಬಾವುಟ' ಪುಸ್ತಕದ ಮೇಲೆ ಅಚ್ಚಾಗಿರುವ ಬಾವುಟದ ಚಿತ್ರ ಬಟ್ಟೆಯ ಬಾವುಟದ ಚಿತ್ರವೇ ಆಗಿದೆ. ಕನ್ನಡ ನಾಡಿನ ಭೂಪಟವನ್ನು ಒಳಗೊಂಡ ಪರಿಷತ್ತಿನ ಲಾಂಛನ ಒಂದು ಮೊತ್ತಮೊದಲಿಗೆ ಕಲ್ಪಿತವಾದದ್ದೂ ಶ್ರೀಯವರ ಸ್ಫೂರ್ತಿಯಿಂದಲೇ.

೪. ಪರಿಷತ್ತಿನ ಮುಖಪತ್ರಿಕೆಯಾಗಿ ಒಂದು ವಾರಪತ್ರಿಕೆಯ ಅಗತ್ಯವನ್ನು ಕಂಡುಕೊಂಡು, 'ಕನ್ನಡ ನುಡಿ'ಯನ್ನು ಪ್ರಾರಂಭಿಸಿದ್ದೂ 'ಶ್ರೀ'ಯವರೇ. ಆ ವೇಳೆಗಾಗಲೇ ಸಾಹಿತ್ಯ ಲೋಕದಲ್ಲಿ ಖ್ಯಾತನಾಮರಾಗಿದ್ದ ಅ. ನ. ಕೃಷ್ಣ ರಾಯರನ್ನು ಅದರ ಪ್ರಥಮ ಸಂಪಾದಕರಾಗಿ ನೇಮಿಸಿದ ವರೂ ಅವರೇ. 'ಕನ್ನಡ ನುಡಿ'ಯಲ್ಲಿ ಪರಿಷತ್ತಿನ ಸುದ್ದಿ ಮತ್ತು ಕನ್ನಡ ಸುದ್ದಿ ಪ್ರಕಟವಾಗಬೇಕು. ಕನ್ನಡ ಸಾಹಿತ್ಯ ಮತ್ತು ಭಾಷೆಗೆ ಸಂಬಂಧಪಟ್ಟಂತೆ ಸಮಕಾಲೀನ ವಿದ್ಯ ಮಾನಗಳ ಬಗೆಗೆ ಉದ್ಬೋಧಕವಾದ ಸಂಪಾದಕೀಯ ಲೇಖನ ಇರಬೇಕು, ಕನ್ನಡ ಸಾಹಿತ್ಯ ಮತ್ತು ಭಾಷೆ ಸಂಬಂಧಪಟ್ಟಂತೆ ವಿಚಾರಪೂರ್ಣ ಲೇಖನಗಳೂ ಇರಬೇಕು ಒಟ್ಟಿನಲ್ಲಿ 'ಕನ್ನಡ ನುಡಿ' ಕರ್ನಾಟಕದ ಗೆಜೆಟಿಯರ್ ಆಗಬೇಕು—ಇದು 'ಶ್ರೀ'ಯವರು ಕನ್ನಡ ನುಡಿಯನ್ನ ಹೊರಡಿಸಿದ ಮುಖ್ಯ ಆಶಯ. ಅನೇಕ ಅವಸ್ಥಾಂತರ ಗಳನ್ನು ದಾಟಿ ಈಗಿನ ರೂಪದಲ್ಲಿ ಉಳಿದು ಬಂದಿರು 'ಕನ್ನಡ ನುಡಿ'ಯ ಬೆಳವಣಿಗೆಯ ಚಿತ್ರವನ್ನು ಮುಂ ಡಲು ಪ್ರತ್ಯೇಕ ಲೇಖನವೇ ಆಗಬೇಕು.

೫. ಬಿ. ಎಂ. ಶ್ರೀ. ಯವರು ಪ್ರಾರಂಭ ಇಂದಿಗೂ ನಡೆದುಕೊಂಡು ಬರುತ್ತಿರುವ ಒಂದು ಮಹತ್ವ ವ್ಯವಸ್ಥೆ 'ಕನ್ನಡ ಸಾಹಿತ್ಯ ಪರೀಕ್ಷೆಗಳು'. ಅಣು ಕಾವ, ಜಾಣ ಎಂಬ ಮೂರು ಹಂತಗಳ ಈ ವ್ಯವಸ್ಥೆಯ ಈಗ ಅಣುಗ ಇಲ್ಲ; 'ರತ್ನ' ಎಂಬ ಉನ್ನತ ಮಟ್ಟ ಪರೀಕ್ಷೆ ಸೇರಿಕೊಂಡಿದೆ. (ಕನ್ನಡೇತರರಿಗೂ ಕನ್ನಡಿಗರ ವಯಸ್ಕ ಅನಕ್ಷರಸ್ಥರಿಗೂ ಪ್ರಯೋಜನವಾಗುವ 'ಅಣುಗ' ಪರೀಕ್ಷೆಯನ್ನು ಮತ್ತೆ ಪ್ರಾರಂಭಿಸುವ ವಿಚ ಪರಿಶೀಲನಾರ್ಹ).

೬. ಕನ್ನಡ ಮಕ್ಕಳೂ ಕನ್ನಡೇತರರೂ ಅನಕ್ಷ ರಾದ ವಯಸ್ಕರೂ ಕನ್ನಡವನ್ನು ಕಲಿಯುವ ಮೊ ಹಂತದಲ್ಲಿ ಒತ್ತಕ್ಷರಗಳು ಒಂದು ದೊಡ್ಡ ಅಡಚ ಒತ್ತಕ್ಷರಗಳನ್ನು ನಿವಾರಿಸುವುದರಿಂದ ಬೆರಳಚ್ಚು ಯಂ ವೇಗವರ್ಧನೆಗೂ ಅಚ್ಚುಕೂಟಕ್ಕೂ ಬಹಳ ಸಹಕ ದೀರ್ಘಸ್ವರಕ್ಕೆಲ್ಲಾ ಒಂದೇ ಚಿಹ್ನೆ ಇರಬೇಕು. ಈ ಸ ರಣೆಗಳು ಬಿ. ಎಂ. ಶ್ರೀ. ಯವರು ಏರ್ಪಡಿಸಿದ್ದ ಕ ಅಕ್ಷರ ಸಂಸ್ಕರಣ ಸಮ್ಮೇಳನದ ಫಲಿತಗಳು. ನ ಜನ ಲಿಪಿ ಸುಧಾರಣೆಗೆ ಮನಸ್ಸು ಕೊಡದಿರು ಪ್ರಗತಿಯ ಚಿಹ್ನೆಯಲ್ಲ. ಲಿಪಿ ಸುಧಾರಣೆಯ ಅ ಕ್ರಾಂತಿಕಾರಕವಾದದ್ದು, ಜನಹಿತಸಾಧಕವಾದದ್ದು, ಪದರವಾದ್ದು; 'ಶ್ರೀ' ಅವರ ದೂರದೃಷ್ಟಿಗೆ ನಿದರ್ಶನ.

೭. ಬಿ. ಎಂ. ಶ್ರೀ. ಯವರು ಉಪಾಧ್ಯಕ್ಷರಾಗುವ ವೇಳೆಗೇ ಹಲವು ಕರ್ನಾಟಕ ಕನ್ನಡ ಸಂಘಗಳು ಹುಟ್ಟಿ ಕೆಲಸ ಮಾಡುತ್ತಿದ್ದವು. ಬೆಂಗಳೂರು ಸೆಂಟ್ರಲ್ ಕಾಲೇಜಿನ, ಮಹಾರಾಜರವರ ಕಾಲೇಜಿನ ಅಧ್ಯಕ್ಷರೂ ಆಗಿದ್ದ ಅವರು ಕರೆದಲ್ಲೆಲ್ಲ ಹೋಗಿ ಕನ್ನಡ ಸಂಘಗಳನ್ನು ಹುಟ್ಟುಹಾಕಿದರು. ಈ ಸಂಘಗಳ ಪ್ರತಿನಿಧಿಗಳೂ ಕಾರ್ಯ ಕರ್ತರೂ ಒಂದು ಕಡೆ ಸೇರಿ ಕನ್ನಡದ ಏಳಿಗೆಗೆ ಒಂದು ಸುಸಂಘಟಿತ ಕಾರ್ಯಕ್ರಮವನ್ನು ರೂಪಿಸಿಕೊಳ್ಳುವುದು ಪ್ರಯೋಜನಕರ ಎಂದು ಭಾವಿಸಿ, ಪ್ರಪ್ರಥಮವಾಗಿ ಕನ್ನಡ ಸಂಘಗಳ ಸಮ್ಮೇಳನವನ್ನು ಏರ್ಪಡಿಸಿದರು. ಈ ಕಾಲದಲ್ಲಿ ಕನ್ನಡ ಸಂಘಗಳು ಪರಿಷತ್ತಿನ ಅಂಗಸಂಸ್ಥೆಗಳಾಗಿ ಸೇರಿ, ಪರಿಷತ್ತಿನ ಕೆಲಸಕ್ಕೆ ಪೂರಕವಾಗಿ ಕೆಲಸ ಮಾಡ ತೊಡಗಿದವು.

೮. ಈಗ ಮಹಿಳೆಯರು ಸಾಹಿತ್ಯ ಪ್ರಪಂಚದಲ್ಲಿ ಒಂದು ಗಣ್ಯ ಸ್ಥಾನ ಪಡೆದಿದ್ದಾರೆ. ಲೇಖಕಿಯರ ಸಂಘವೇ ಅಸ್ತಿತ್ವಕ್ಕೆ ಬಂದಿದೆ. ಈ ಬೆಳವಣಿಗೆಗೆ 'ಶ್ರೀ'ಕಾರ ಹಾಕಿದವರೂ ಶ್ರೀಯವರೇ. ಅವರ ಕಾಲದಲ್ಲೇ ಪರಿಷತ್ತಿನ ಮಹಿಳಾ ಶಾಖೆ ಒಂದು ಪ್ರಾರಂಭವಾಗಿ, ಸಮ್ಮೇಳನಗಳಲ್ಲಿ ಮಹಿಳಾ ಗೋಷ್ಠಿ ಏರ್ಪಡುವುದಕ್ಕೂ ಅದು ದಾರಿಮಾಡಿ ಕೊಟ್ಟಿತು. ಮಹಿಳೆಯರ ಜೊತೆಯಲ್ಲಿ ಮಕ್ಕಳ ಕೂಟ ಗಳನ್ನೂ ನಡೆಸಬೇಕೆಂಬುದು ಶ್ರೀ ಅವರ ಆಸೆ ಆಗಿತ್ತು.

೯. ಪ್ರಾರಂಭವಾಗಿ ದೀರ್ಘ ಕಾಲ ನಡೆಯದೆ ಹೋದ ಇನ್ನೊಂದು ಉಪಯುಕ್ತ ಕಾರ್ಯಕ್ರಮ, ಆಸಕ್ತಿಯುಳ್ಳವರಿಗೆ ತಮಿಳು ಕಲಿಯುವ ಅವಕಾಶ. ಪಿ. ಎಂ. ಸೋಮಸುಂದರಂ ಪಿಳ್ಳೆ ಅವರೂ ಎಸ್. ರುದ್ರ ಪತಿ ಅವರೂ (?) ಕೆಲವು ಕಾಲ ಈ ತಮಿಳು ತರಗತಿಗಳನ್ನು ನಡಸಿದರು. (ಈ ಲೇಖಕನೂ ತರಗತಿಗಳ ಪ್ರಯೋಜನ ಪಡೆದ, ಅರೆಕಲಿಕೆಯ ವಿದ್ಯಾರ್ಥಿಗಳಲ್ಲಿ ಒಬ್ಬ!)

೧೦. ಪರಿಷತ್ತಿನ ಕಾರ್ಯವ್ಯಾಪ್ತಿಯನ್ನು ವಿಕೇಂದ್ರೀಕರಣಗೊಳಿಸಿ ಅಖಿಲ ಕರ್ನಾಟಕಕ್ಕೆ ವಿಸ್ತರಿಸಿದ್ದು ಈ ಮೊದಲು ಆಲೂರ ವೆಂಕಟರಾಯರು ಬಯಸಿದ್ದಕ್ಕಿಂತ ಬಹಳ ಮುಂದೆ ಹೋಯಿತು. ಅವರ ಬಯಕೆ ಈಡೇರಿದ್ದರೆ ಅದೊಂದು ಧಾರವಾಡದ ಸಂಸ್ಥೆಯಾಗಿ ಉಳಿಯುವ ಸಂಭವವೇ ಹೆಚ್ಚಾಗಿತ್ತು. ಬಿ. ಎಂ. ಶ್ರೀ. ಅವರು ಪ್ರಾರಂಭಿಸಿದ ನಾಲ್ಕು ಪ್ರಾಂತ ಸಮಿತಿಗಳು (ಮೈಸೂರು ಕರ್ನಾಟಕ ಸಮಿತಿ, ಉತ್ತರ ಕರ್ನಾಟಕ ಸಮಿತಿ, ಮಂಗಳೂರು–ಕರ್ನಾಟಕ–ಕೊಡಗು ಸಮಿತಿ, ಹೈದರಾಬಾದು ಕರ್ನಾಟಕ ಸಮಿತಿ) ನಿಯಮಾನುಸಾರ ಇವು ಸ್ವಾಯತ್ತವಾಗಿದ್ದುವು.

೧೧. ಜಿಲ್ಲಾ ಸಮಿತಿಗಳ ಕಲ್ಪನೆ: ಪರಿಷತ್ತಿನ ಕಾರ್ಯಕಲಾಪಗಳಿಗೆ ಅಖಿಲ ಕರ್ನಾಟಕ ವ್ಯಾಪ್ತಿಯ ವಿಸ್ತಾರವನ್ನು ಒದಗಿಸುತ್ತಿರುವ ಜಿಲ್ಲಾ ಸಮಿತಿಗಳ ವ್ಯವಸ್ಥೆಯ ಕನಸನ್ನು 'ಶ್ರೀ'ಯವರು ಕಟ್ಟಿಕೊಂಡಿದ್ದ ಸಂಗತಿ ನಿಸ್ಮೃತಿಯ ಗರ್ಭದಲ್ಲಿ ಅಡಗಿ ಹೋಗಿದೆ. ಕನ್ನಡ ನುಡಿಯ ಮೊದಲ ಸಂಪುಟಗಳ ಪುಟಗಳನ್ನು ತಿರುವಿ ಹಾಕಿದರೆ ಅದು ನೆನಪಿನಲ್ಲಿ ಸುಳಿಯುತ್ತದೆ. ಅವರ ಮಾತು ಗಳು ಇವು:

> "ಕನ್ನಡ ನಾಡಿನಲ್ಲಿ ಜಿಲ್ಲಾ ಸಾಹಿತ್ಯ ಸಮ್ಮೇಳನ ಗಳು ಆಗಾಗ್ಗೆ ಅಲ್ಲಲ್ಲಿ ಹಲವು ವರ್ಷಗಳಿಂದ ನಡೆಯು ತ್ತಿವೆ. ಮತ್ತು ಈಚೆಗೆ ಪರಿಷತ್ತಿನ ಪ್ರಾಂತ ಸಮಿತಿ ಗಳು ಈ ಬಗ್ಗೆ ಸಹಕರಿಸುತ್ತಿವೆ. ಪ್ರತಿಯೊಂದು ಜಿಲ್ಲೆಗೂ ಸಮಿತಿ ಏರ್ಪಟ್ಟರೆ ಜಿಲ್ಲೆ ಜಿಲ್ಲೆಗಳಲ್ಲಿ ಪರಿಷತ್ತಿನ ಕಾರ್ಯಗಳು, ನಾಡಿನ ಪುನರುಜ್ಜೀವನ ಸಾಧನಗಳು ಹೆಚ್ಚುವುವೆಂದು ಜನತೆಯಲ್ಲಿ ಹೆಚ್ಚು ಮನವರಿಕೆಯಾಗುತ್ತಿದೆ. ಈಗಾಗಲೇ ಕೆಲವು ಜಿಲ್ಲೆ ಗಳ ಮುಂದಾಳುಗಳು ಜಿಲ್ಲಾ ಸಮಿತಿಗಳನ್ನು ಏರ್ಪಡಿಸಿ ತಮ್ಮ ನಿಟ್ಟಿನ ಕನ್ನಡದ ಮುನ್ನಡೆಯನ್ನು ಹೆಚ್ಚು ಆಸಕ್ತಿಯಿಂದ ಕೈಕೊಂಡಿದ್ದಾರೆ. ತಮ್ಮ ಜಿಲ್ಲೆಗಳಲ್ಲಿ ಪ್ರತಿವರ್ಷವೂ ತಪ್ಪದೆ ಒಂದು ಸಮ್ಮೇಳನ ನಡಸುವುದಕ್ಕೂ ಅಲ್ಲಿ ಆಯಾ ಜಿಲ್ಲೆಗೆ ಮತ್ತು ಇಡಿಯ ಕನ್ನಡನಾಡಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಚರ್ಚಿಸಿ ಗೊತ್ತುವಳಿಗಳನ್ನು ಮಾಡುವುದಕ್ಕೂ ಆ ಗೊತ್ತುವಳಿಗಳನ್ನು ಕಾರ್ಯ ರೂಪಕ್ಕೆ ತರುವುದಕ್ಕೂ ಒಂದು ಸ್ಥಳೀಯ ಸಂಸ್ಥೆ ಸಿದ್ಧವಾಗುತ್ತದೆ."

'ಕನ್ನಡ ನುಡಿ'ಯ ತಮ್ಮ ಸಂಪಾದಕೀಯದಲ್ಲಿ (೫–೪–೪೨) ಮೇಲಿನ ಮಾತನ್ನು ಹೇಳಿ, ಈ ಜಿಲ್ಲಾ ಸಮಿತಿಗಳಿಗೆ ಸಪ್ತಕಾರ್ಯ ಸೂತ್ರಗಳನ್ನು ವಿವರಿಸಿ, ತಮ್ಮ ಮಾತನ್ನು ಹೀಗೆ ಮುಗಿಸಿದರು:

> "ಈ ಸಮಿತಿಗಳು ಬೆಳೆದು ಕಾರ್ಯಗತವಾದರೆ, ಪರಿಷತ್ತಿನ ಅಂಗರಚನೆಯಲ್ಲಿ ಇದಕ್ಕೆ ಸ್ಥಾನವನ್ನೂ ನಿಯಮಗಳನ್ನೂ ಕಲ್ಪಿಸಬಹುದು. ಸದ್ಯಕ್ಕೆ ಆಯಾ ಪ್ರಾಂತ ಸಮಿತಿಗಳೊಡನೆ ಇವು ಸಂಬಂಧವನ್ನಿಟ್ಟು ಕೊಳ್ಳಬಹುದು."

(೪೦ನೇ ಪುಟ ನೋಡಿ)



# ನೂರರ ನೆನಪು

※ ಹಂಪನ

“ ಬಿ. ಎಂ. ಶ್ರೀಯವರಂಥ ಒಬ್ಬ ಸಮರ್ಥರಾದ ವ್ಯಕ್ತಿ ಸರಿಯಾದ ಸ್ಥಾನಕ್ಕೆ ಬಂದದ್ದರಿಂದ ಐವತ್ತು ವರ್ಷ ನಾವು ಅದರ ಸತ್ಫಲವನ್ನು ಅನುಭವಿಸಿದ್ದೇವೆ. ಮುಂದೆ ಇನ್ನು ಐವತ್ತು ವರ್ಷವಾದರೂ ಆ ಫಲ ದೊರಕುತ್ತಿರುತ್ತದೆ ” (ಎ. ಆರ್. ಕೃ.) ಎಂಬ ಹೇಳಿಕೆ ಸ್ವಭಾವೋಕ್ತಿಯೇ ಹೊರತು ಅತಿಶಯೋಕ್ತಿಯಲ್ಲ. ಕನ್ನಡ ಇರುವವರೆಗೆ ಅವರ ನೆನಪು ಅಮರವಾಗಿರುತ್ತದೆ.

ಇಂದು ‘ ಕನ್ನಡ ನಾಡು ನುಡಿಗಳ ಮುನ್ನಡೆಗಾಗಿ ದುಡಿದವರು ’ ಎಂದು ಹೇಳುವುದು ಒಂದು ಸವೆದ ನುಡಿಗಟ್ಟು. ಆದರೆ ಕನ್ನಡ ಸಾಹಿತ್ಯವನ್ನೂ ಕನ್ನಡಿಗರನ್ನೂ ಹೊಸ ದಂಡೆಗೆ ಕೊಂಡೊಯ್ದು ನಾವಿಕ ಶ್ರೀಯವರ ವಿಚಾರವಾಗಿ ಅದನ್ನು ಅನ್ವಯಿಸಿದರೆ ಆ ಮಾತಿಗೆ ಮತ್ತೆ ಚಲಾವಣೆ ಮಹತ್ವ ಬರುತ್ತದೆ. ಕನ್ನಡ ಸಾಹಿತ್ಯವನ್ನು ಬೆಳೆಸಿದವರು ಬಹಳ ಇದ್ದಾರೆ; ಶ್ರೀಯವರು ಕೇವಲ ಅಷ್ಟನ್ನೇ ಮಾಡಿದ್ದರೂ ಅಜರಾಮರರಾಗಿರುತ್ತಿದ್ದರು. ತಮ್ಮ ತಾಯ್ನುಡಿ ಬಡ ಕನ್ನಡಕ್ಕೆ ಒದಗಿದ್ದ ಕಂಟಕವನ್ನು ನಿವಾರಣೆ ಮಾಡಬೇಕೆಂದು ಅವರು ಸಂಕಲ್ಪಿಸಿದ ಗಳಿಗೆ ಅಮೃತ ಗಳಿಗೆ. ‘ಕನ್ನಡ ಮಾತು ತಲೆ ಎತ್ತುವ ಬಗೆ ಎಂಬ ಉಪನ್ಯಾಸ ಹೊಸಗನ್ನಡ ಸಾಹಿತ್ಯದಲ್ಲಿ ಒಂ Classic. ಇದನ್ನು ಶ್ರೀಯವರು ನೀಡಿದ್ದು ೧೯೧೧ರ ಧಾರವಾಡದಲ್ಲಿ. ಅದನ್ನು ಉದಾರವಾಗಿ ಮುದ್ರಿಸಿಕೊ ವರು ವಿದೇಶಿಯರಾದ ಟೇಟ್ ಸಾಹೇಬರು ! ಅವರಿ ಆದ ಈ ಉದ್ಘಾಟನೆಯಿಂದ ಮುಂದೆ ಹೆದ್ದಾರಿ ತೆರೆಯಿತು, ಹಿರಿದು ಫಲ ದೊರೆಯಿತು.

ಅವರು ಹೆಚ್ಚಾಗಿ ಓದಿದ್ದು ಇಂಗ್ಲಿಷ್ ಸಾಹಿತ್ಯವ ಅವರು ದಕ್ಕಿದ್ದು ಕನ್ನಡಕ್ಕೆ, ಅವರು ಒಲಿದದ್ದು ಕನ ಇದನ್ನು ಪಠ್ಯವಾಗಿ ಓದಿದವರಲ್ಲ, ಸ್ವಇಚ್ಛೆಯಿ ಸ್ವಾಧ್ಯಾಯದಂತೆ ಸ್ವಂತವಾಗಿ ಓದಿಕೊಂಡವರು. ದೀರ್ಘ ಅವಧಿಯವರೆಗೆ ಮೌನವ್ಯವಸಾಯವನ್ನು ರ ವಾಗಿ ಮಾಡಿದವರು. ಹಳಗನ್ನಡವನ್ನು ಸ್ವಾಂ ಖಾಯ ಅಧ್ಯಯನಿಸಿದರು. ಇದು ಎಷ್ಟು ಆಳ–ಅಗಲ ಕೂಡಿತ್ತೆಂದರೆ ಕೇವಲ ಕನ್ನಡವೊಂದನ್ನೇ ಕಲಿತ ಅಧ್ಯಾ ರಿಗೂ ಅಚ್ಚರಿಯಾಗುತ್ತಿತ್ತು. ಇದೊಂದು ಕರ್ಮಧ ಸಂಯೋಗ, ಪೂರ್ವಜನ್ಮ ಸಂಸ್ಕಾರ–ಎಂದನಿಸಬಹ

ಕಾಲೇಜುಗಳಲ್ಲಿ ಕನ್ನಡ ಕಲಿಸುವ ಓಜರೂ ಶ್ರೀಯವರಲ್ಲಿದ್ದ ಪ್ರಗಲ್ಭ ಪಾಂಡಿತ್ಯ ಮತ್ತು ವೈದುಷ್ಯದೆದುರಲ್ಲಿ ನಾಚಿ ನೀರಾಗುತ್ತಿದ್ದರು. ಪ್ರಕಟಿತವೇ ಅಲ್ಲದೆ ಅಪ್ರಕಟಿತ ಕಾವ್ಯಗಳಿಂದ ಧಾರಾಳವಾಗಿ, ನಿರರ್ಗಳವಾಗಿ ಕಂದ ವೃತ್ತಗಳನ್ನು ನೀರು ಕುಡಿದಂತೆ ಹೇಳುತ್ತಿದ್ದರು. ಅವರು ವಕೀಲರಾಗುವುದು ತಪ್ಪಿ ಉಪಾಧ್ಯಾಯರಾದದ್ದು ಯೋಗಾಯೋಗವೇ ಸರಿ ; ಅದು ಪ್ರಾಧ್ಯಾಪಕ ವಿಯರ್ ಅವರು ಕೊಟ್ಟ ವರ.

"ಇಂದು ಕನ್ನಡ ಪಡೆದಿರುವ ಗೌರವ ಸ್ಥಾನಕ್ಕೆ ಬಿ. ಎಂ. ಶ್ರೀಯವರು ಹಲವು ವಿಧಗಳಲ್ಲಿ ಕಾರಣರು" (ಎ. ಆರ್. ಕೃ.). ಶ್ರೀಯವರು ಅನೇಕ ಮೊದಲುಗಳನ್ನಿತ್ತ ಮಹನೀಯರು. ಕನ್ನಡ ಎಂ.ಎ. ತರಗತಿ ತೆರೆದರು, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಏಕಕಾಲದಲ್ಲಿ ಇಂಗ್ಲಿಷ್-ಕನ್ನಡ ಭಾಷೆಯ ಪ್ರಾಧ್ಯಾಪಕರು, ಗ್ರಂಥ ಪ್ರಕಟನೆ ಯೋಜನೆಯನ್ನು ಆರಂಭಿಸಿದರು, ಪ್ರಾಧ್ಯಾಪಕ-ರಿಜಿಸ್ಟ್ರಾರ್ - ಪ್ರಿನ್ಸಿಪಾಲ್ - ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರು ; ಹೊಸ ಛಂದಸ್ಸಿನ ನೂತನ ಪ್ರಯೋಗದ ಬೆಡಗು ಮೂಡಿಸಿದರು, ಕಾವ್ಯದ ಕಣ್ಣು ತೆರೆಸಿದರು ; "ಅಕ್ಷರ ಪ್ರಚಾರ, ಲಿಪಿ ಸುಧಾರಣೆ, ವಯಸ್ಕರ ಶಿಕ್ಷಣ : ಮೊದಲನೇ ತರಗತಿಯಿಂದ ಎಂ.ಎ. ತರಗತಿಯವರೆಗೆ ಕನ್ನಡ ಪಠ್ಯಪುಸ್ತಕಗಳ ಪರಿಷ್ಕರಣ, ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕೆ ಸಂಬಂಧಿಸಿದ ಸೂಕ್ಷ್ಮ ವ್ಯವಹಾರಗಳು, ಸಾಹಿತ್ಯ ಪರಿಷತ್ತಿನ ಹಲವಾರು ಜಟಿಲ ಸಮಸ್ಯೆಗಳು, ಒಂದು ಮಾತಿನಲ್ಲಿ ಸಂಕ್ಷೇಪಿಸುವುದಾದರೆ ಈಗ ತಾನೆ ಮುಗಿದ ತಲೆಮಾರಿನ ಕರ್ನಾಟಕದ ಎಲ್ಲ ಪ್ರಗತಿ ಪ್ರಯತ್ನಗಳಿಗೂ ಅವರು ಚೈತನ್ಯದುಸಿರು, ಜೀವರಕ್ತ, ವಾಹಕ ಶಕ್ತಿ" (ಎಸ್. ವಿ. ರಂಗಣ್ಣ).

ಇಂಗ್ಲಿಷ್-ಸಂಸ್ಕೃತಗಳ ಉದ್ದಗಲಗಳನ್ನು ನಿಕಟವಾಗಿ ಬಲ್ಲ ಈ ಸವ್ಯಸಾಚಿಯ ನೆರವು ನೆರಳು ಕನ್ನಡಕ್ಕೆ ಆ ಕಾಲದಲ್ಲಿ ದೊರೆತದ್ದು ದೊಡ್ಡ ಭಾಗ್ಯ ನಿಧಿ. ಹಗಲಲ್ಲಿ ಪಂಜು ಹಿಡಿದು ಹುಡುಕಾಡಿದರೂ ಆಗ ಅವರಷ್ಟು ಮೇಧಾವಿ, ಮೇಲುಮಟ್ಟದ ಪ್ರತಿಭಾಶಾಲಿ-ಕವಿ ಇನ್ನೊಬ್ಬ ಇರಲಿಲ್ಲವೆನ್ನುತ್ತಾರೆ. ಇಂಥವರ ಅವಲಂಬನ ಮಾತ್ರದಿಂದ ಕನ್ನಡಕ್ಕೆ ಎಷ್ಟೋ ಹೊಸ ದಾರಿಗಳು ತೆರೆದುವು, ಕವಲುಗಳು ಒಡೆದುವು. ಈ ಕಾರಣಪುರುಷರ ಪೋಷಣೆ, ಮಾರ್ಗದರ್ಶನದಿಂದ ಹೊಸಗನ್ನಡ ಪುಷ್ಟಿಗೊಂಡು ಬೆಳೆಯಲು ತುಂಬ ಸಹಾಯವಾಯಿತು. ಕನ್ನಡ ಕೈಂಕರ್ಯಕ್ಕೆ ಕಂಕಣ ಕಟ್ಟಿದವರಂತೆ ಅವರು ಪ್ರಮುಖ ಕವಿ-ಕಾವ್ಯ ಕುರಿತು ಹಲವಾರು ಕಡೆ ಕೊಟ್ಟ ಪ್ರಚಾರ ಉಪನ್ಯಾಸಗಳು ಉಲ್ಲೇಖನಾರ್ಹವಾಗಿವೆ. ಹೊಸಗನ್ನಡಕ್ಕೆ ಶ್ರೀಯವರು ಶ್ರೀಕಾರ ಬರೆದರು, ಪ್ರಭಾವಳಿ ಕಟ್ಟಿದರು, ಹೊಂಗಾಲವೆನಿಸಿದರು. ಸಕ್ಕರೆಯ ಉಂಡೆಯಂತೆ ಕನ್ನಡ ಕಾವ್ಯ ಸರಸಿಯಲ್ಲಿ ಕರಗಿಬಿಡುತ್ತಿದ್ದರು.

ಕನಸುಣಿ ಹಾಗೂ ಭಾವಜೀವಿಯಾಗಿದ್ದ ಶ್ರೀಯವರು ಕಾವ್ಯಜೀವಿ ಮತ್ತು ಉತ್ತಮ ಸಹೃದಯಿಯೂ ಆಗಿದ್ದರು. ಆದಿಪಂಪನಂತೆ ಭವ್ಯಮೂರ್ತಿ, ಅದೇ ದುಂದುಭಿ ಗಭೀರ ನಿನದ, ಮಧ್ಯಮ ತನುಗಾತ್ರ, ಒಪ್ಪ ಓರಣದ ಮೈಕಟ್ಟು, ಒಟ್ಟಿನಲ್ಲಿ ಸ್ಫುರದ್ರೂಪಿ, ಒಮ್ಮೆ ನೋಡಿದವರು ಮರೆಯಲಾರರು. ತುಂಬ ಚಟುವಟಿಕೆಯುಳ್ಳ ಆಳು. ಕನ್ನಡ ನಾಡನ್ನು ಎಡೆಬಿಡದೆ ಅಡ್ಡಾಡಿದರು. ಸಾಹಿತ್ಯ ಯಾತ್ರೆ ಕೈಗೊಂಡರು. ಅದು ಶುದ್ಧ ಜೈತ್ರಯಾತ್ರೆಯಂತೆ ಕನ್ನಡ ಪಡೆಯನ್ನು ಕಟ್ಟಲು ನೆರವಾಯಿತು. ದಾರಿ, ದೂರ, ದಣಿವು—ಇವನ್ನು ಲೆಕ್ಕಿಸಲಿಲ್ಲ. ಹೋದ ಬಂದ ಎಡೆಗಳಲ್ಲಿ ಜನರ ಗೌರವಕ್ಕೆ ಪಾತ್ರರಾದರು—ಸಂತೋಷಂ ಜನಯೇತ್ ಪ್ರಾಜ್ಞಃ. ತಮ್ಮ ರಸಾರ್ದ್ರತೆಯನ್ನು ಕೇಳುಗರಲ್ಲೂ ಸಂವಹನಿಸುತ್ತಿದ್ದರು. ಹೇಳಿ ಕೇಳಿ ಅವರು ಮೇಲುತರಗತಿಯ ಮಾತುಗಾರರು. ಭಾಷಣ ಕಲೆ ಅವರ ಅಡಿಯಾಳು, ಅಷ್ಟು ಪ್ರಚಂಡ ವಾಗ್ಮಿ. ಮಾತಿನ ಮೂಲಕ ದೊಡ್ಡ ಉಪಕಾರವೆಸಗಿದರು. ಆಡಿದ ಮಾತುಗಳು ಇಂದು ಉಳಿದಿಲ್ಲ. ಅದರ ಪರೋಕ್ಷ ಪ್ರಭಾವ ಹಲವು ಕಡೆ ಕುಡಿಯಿಟ್ಟಿತು. ತನ್ಮಯರಾಗಿ ಮಾತಾಡುತ್ತಾ ಸಭೆಯ ಮೇಲೆ ಮೋಹಕವಾದ ಮಾಯೆಯ ತೆಳುವಾದ ಬಲೆಯನ್ನು ಬೀಸುತ್ತಿದ್ದರು. ಯಾವ ವಿಷಯವನ್ನಾದರೂ ಹಿಡಿತಕ್ಕೆ ತೆಗೆದುಕೊಳ್ಳಬಲ್ಲ ಮೇಧಾವಿಯಾಗಿದ್ದರು. ತಾವು ತಿಳಿದುದನ್ನು ಅಷ್ಟೇ ಸ್ಪಷ್ಟವಾಗಿ ತಿಳಿಸಬಲ್ಲ ಪ್ರವಚನ ವತ್ಸಲರು. ವಿಷಯ ಕರತಲಾಮಲಕ, ವಾಗ್ಝರಿ ನಿರರ್ಗಳ, ಮುಂಗಾರು ಗುಡುಗಿನಂತಹ ಗಂಡುದನಿಯ ಶ್ರೀಮಂತ ಕಂಠಶ್ರೀ—ಇನ್ನೇನು ಭಾಗ್ಯ ಬೇಕು ಭಾಷಣ ವೈಭವಶ್ರೀಗೆ! ಅವರ ಭಾಷಣ ಬೆಳಕು ಚೆಲ್ಲಿದಂತೆ, ಅಂಥ ವಾಗ್ಮಿತಾ ಪ್ರಾಗಲ್ಭ್ಯ ಅಪರೂಪ. ಜನ ಅವರ ಮಾತುಗಳನ್ನು ಬಯಸುತ್ತಿದ್ದರು, ಅವರಿಗೆ ಶ್ರೀಯವರ ಭಾಷಣವೆಂದರೆ ಸಿದ್ಧವಾಗಿರುವ ರಸದೌತಣ ದೂಟ.

ಶ್ರೀಯವರಲ್ಲಿ ವಿರೋಧಾಭಾಸಗಳೂ ಇದ್ದುವು. ವೆಂಕಣ್ಣಯ್ಯನವರಂತೆ 'ಅಜಾತ ಶತ್ರು' ಎಂದು ಎನಿಸಿ

ಕೊಳ್ಳಲಿಲ್ಲ. ಇದಕ್ಕೆ ಅವರಲ್ಲಿದ್ದ ಗುಣ ದೌರ್ಬಲ್ಯ ಕಾರಣ. ಪ್ರಭುಕೃಪಾಕಟಾಕ್ಷ 'ರಾಜಸೇವಾಸಕ್ತ' ದಾಕ್ಷಿಣ್ಯ ಪರವಶತೆಯಿಂದ ಕೆಲವರ ಸ್ನೇಹ ಕಹಿಯಲ್ಲಿ ಪರ್ಯವಸಾನವಾಯಿತು. ಮಹಾರಾಜರ ಅವಿಚ್ಛಿನ್ನ ಭಕ್ತರು, ಆದರಿಂದ ದಾಕ್ಷಿಣ್ಯಪರರಾಗುತ್ತಿದ್ದರು. ಬಿಂಕ ಬಿಗುಮಾನಗಳಿದ್ದುವು. ಅಂತರ್ಮುಖತೆಯಿತ್ತು. ಏಕಾಂತಪ್ರಿಯರಾಗಿದ್ದರು. ಇಂಗ್ಲಿಷ್ ಮತ್ತು ಇಂಗ್ಲೆಂಡ್–ಮೈಸೂರು ದೊರೆಗಳ ಒಡೆತನಕ್ಕೆ ಅಡಿಯಾಳಾಗಿದ್ದುದರಿಂದ ದೇಶದಲ್ಲಿ ಸ್ವಾತಂತ್ರ್ಯ ಆಂದೋಲನ ನಡೆಯುತ್ತಿರುವಾಗ ಅದಕ್ಕೆ ಅವರು ಸ್ಪಂದಿಸಲಾಗಲಿಲ್ಲ, ಇವರ ಬರವಣಿಗೆಯಲ್ಲಿ ಬಿಡುಗಡೆಯ ಬಯಕೆ ಕಾಣಿಸಲಿಲ್ಲ. ಸಮಕಾಲೀನ ಸ್ವಭಾವವಾದ ಈ ಮನಃ ಪ್ರವೃತ್ತಿಯಿಂದ ಅವರ ಸಾಹಿತ್ಯ, ಕಾರ್ಯ ಪ್ರವೃತ್ತಿ ಕುಂಟಿತವಾಯಿತೆಂದಾಗಲಿ, ಕಲುಷಿತವಾಯಿತೆಂದಾಗಲಿ ನನ್ನ ಅಭಿಪ್ರಾಯವಲ್ಲ. ಅವರಲ್ಲಿ ಕೆಲವು ಅತಿಗಳಿದ್ದುವೆಂಬುದನ್ನು ಹೇಳುವುದು ನನ್ನ ಉದ್ದೇಶ. ಅತಿಭಾವುಕತೆ ಅವರನ್ನು ಆವರಿಸಿಕೊಳ್ಳುತ್ತಿತ್ತು, ಭಾವಪರವಶತೆ ತಕ್ಷಣ ತಬ್ಬಿಕೊಳ್ಳುತ್ತಿತ್ತು. ಸಣ್ಣ ಸಂಗತಿಗಳು ಚಿತ್ತಸ್ವಾಸ್ಥ್ಯವನ್ನು ಕಲಕಿ ಬಗಡೇಳಿಸುತ್ತಿದ್ದುವು. ರಾಗ ದ್ವೇಷಗಳೂ ತುಮುಲ ತಳಮಳಗಳೂ ಅವರನ್ನು ಬಿಟ್ಟಿರಲಿಲ್ಲ. ಇವೆಲ್ಲಾ ಇದ್ದುದರಿಂದಲೇ ಕೆಲವು ಸಂದರ್ಭಗಳಿಗೆ ಅವರು ವಿಚಿತ್ರವಾಗಿ ಸ್ಪಂದಿಸಿದರು. ಇದ್ದಕ್ಕಿದ್ದಹಾಗೆ ಅವರ ಸಂವಹನಶಕ್ತಿ ದಿಕ್ಕು ತಪ್ಪುತ್ತಿದ್ದುದು ಇಂಥ ಇತರ ಕಾರಣಗಳಿಗಾಗಿ. ಆದರೆ ಇವೆಲ್ಲಾ ಅವರ ಘನ ವ್ಯಕ್ತಿತ್ವದ ಬೆಳಕಿನ ತೊರೆಯಲ್ಲಿ ಕೊಚ್ಚಿಹೋಗುತ್ತಿದ್ದುವು. ಸಾಂಸಾರಿಕ ಏರುಪೇರುಗಳ ಹೊಡೆತಗಳಿಂದ ಹತಾಶೆ ಮಡುಗಟ್ಟಿ ನಿರ್ವಿಣ್ಣರಾಗಿದ್ದ ವ್ಯಕ್ತಿ ಹೀಗೆ ವರ್ತಿಸುವುದರಲ್ಲಿ ಸಹಜತೆಯಿತ್ತು; ಈ ಒಳನೋಟದ ಇಣಕು ನೋಟ, ವಿಷಣ್ಣ ಛಾಯೆ ಅವರ ಬರವಣಿಗೆಯಲ್ಲಿ ಅಲ್ಲಲ್ಲಿ ಗುಪ್ತಗಾಮಿನಿಯಾಗಿ ಹರಿದಿದೆ.

ಆದರೆ ಇಷ್ಟು ನಿಜ, ಹೊಸಗನ್ನಡ ನವೋದಯಕ್ಕೆ
ಶ್ರೀಯವರು ನಾಂದಿ. ಕುಂಟುತ್ತಾ ತೆವಳುತ್ತಾ ಹೊರಟಿದ್ದ
ಬಡ ಹೊಸಗನ್ನಡ ಕಾವ್ಯಕ್ಕೆ ಹೊಸ ಆಯಾಮ ಕೊಟ್ಟರು.
ತನ್ನದೇ ಆದ ಚೌಕಟ್ಟಿಗೆ ಚಡಪಡಿಸುತ್ತಿದ್ದ ಕಾವ್ಯಕ್ಕೆ
ನಿರ್ದಿಷ್ಟ ಆಕಾರ ಕೊಟ್ಟರು. ರಕ್ತಹೀನತೆಯಿಂ
ಬಳಲುತ್ತಿದ್ದ ಭಾಷೆಗೆ ಹೊಸ ನೆತ್ತರು ತುಂಬಿ ಕಾಯಕಲ್ಪ
ವೆಸಗಿದರು. ವರ್ಣ ಧ್ವನಿಗಳಿಗೆ ಮೂರ್ತರೂಪ ಕೊಟ್ಟರು.
ಶ್ರೀಯವರ ಯಾಜಮಾನ್ಯ ಹಾಗೂ ಸಾರಥ್ಯದಲ್ಲಿ ನಡೆ
ಸಾಂಸ್ಕೃತಿಕ ಚಳುವಳಿಯಿಂದ ಒಂದು ಹೊಸ ಯು
ಪ್ರಾರಂಭವಾಯಿತು.

ಇಂತಪ್ಪನ್ ಇನ್ನಿಲ್ಲ=ಎಂಬಂತೆ ಬಾಳಿದ ಶ್ರೀಯ
ವರನ್ನು ಕುರಿತು ಕನ್ನಡ ನುಡಿಯ ಈ ವಿಶೇಷ ಸಂಚಿ
ಯನ್ನು ಸಂತೋಷದಿಂದ ಕನ್ನಡ ಸಾಹಿತ್ಯ ಪರಿಷತ್ತು
ಪ್ರಕಟಿಸುತ್ತಿದೆ. ಅವರು ಈ ಸಂಸ್ಥೆಯ ಆದ್ಯರು
ಆಧಾರಸ್ತಂಭ, ಉಪಾಧ್ಯಕ್ಷರು, ಅವರ ಕೊಡು
ಯಿಂದ ಅಡಿಯಿಡಲು ತೊಡಗಿದ, ಅವರ ಹೆಸರನ್ನ
ಹೊತ್ತು ನಿಂತಿರುವ ಬಿ. ಎಂ. ಶ್ರೀ. ಅಚ್ಚುಕೂ
ದಲ್ಲೇ ಈ ಸಂಚಿಕೆ ಮುದ್ರಣವಾಗಿ ಹೊರಬರುತ್ತಿ
ಈ ವರ್ಷ ಪೂರ್ತಿ ಶ್ರೀಯವರನ್ನು ಕುರಿತ ಶತಮಾನೋತ್ಸ
ಕಾರ್ಯಕ್ರಮಗಳು ಕರ್ನಾಟಕದಲ್ಲಿ ನಡೆಯಲಿವೆ. ಆ ಎ
ಕಾರ್ಯಕ್ರಮಗಳ ಮುಂಗೋಳಿ ಈ ವಿಶೇಷ ಸಂಚಿ
ಇದರಲ್ಲಿ ಆಯ್ದ ಕೆಲವು ಪ್ರಕಟಿತ ಲೇಖನಗಳೂ ಲೇಖ
ಭಾಗಗಳೂ ಇರುವಂತೆ ಇದಕ್ಕೆಂದೇ ಬರೆದ ಹೊಸ ಲೇಖ
ಗಳೂ ಇವೆ. ಸುದೈವದಿಂದ ಶ್ರೀಯವರ ಸಮಕಾಲೀ
ದಾಖಲೆಗಳು ವಿಪುಲವಾಗಿವೆ. ಸಮಕಾಲೀನರು ಸಾಕಷ್ಟು
ಬರೆದಿದ್ದಾರೆ; ಜತೆಗೆ ಅವರಲ್ಲಿ ಕೆಲವರು ಇನ್ನೂ ಜೀವಿಸಿದ
ಶ್ರೀಸ್ಮರಣೆಗೆ ಪುಷ್ಪವೃಷ್ಟಿ ಮಾಡುತ್ತಿದ್ದಾರೆ. ಅವರ
ಕೃತಜ್ಞತೆಗಳು; ಇನ್ನು ಈ ವಿಶೇಷ ಸಂಚಿಕೆ ನಿಮ್ಮದು–
ಓದಿ ಆನಂದಿಸುವ ಓದುಗರದು.

---

"ನನ್ನ ಜೀವಮಾನದ ತೀರ್ಪು ಕ. ತಾಯಸೇವೆ."



# ಬಿ ಎಂ. ಶ್ರೀಕಂಠಯ್ಯನವರ ಬದುಕು-ಬರಹ

೧೮೮೪ : ತುಮಕೂರು ಜಿಲ್ಲೆಯ ಸಂಪಿಗೆಯಲ್ಲಿ ಜನವರಿ ಮೂರರಂದು ಜನನ; ಮುಂದೆ ಶ್ರೀರಂಗಪಟ್ಟಣ, ಮೈಸೂರು, ಬೆಂಗಳೂರು ಮತ್ತು ಮದ್ರಾಸ್‌ಗಳಲ್ಲಿ ಶಿಕ್ಷಣ.

೧೯೦೩ : ಎಫ್. ಎ.

೧೯೦೪ : ಬೆಳ್ಳೂರಿನ ರಾಮಸ್ವಾಮಿಯವರ ಮಗಳು ದೇವಮ್ಮನವರೊಡನೆ ವಿವಾಹ

೧೯೦೬ : ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಪದವಿ

೧೯೦೭ : ಮದರಾಸು ವಿಶ್ವವಿದ್ಯಾಲಯದಲ್ಲಿ ಬಿ.ಎಲ್ ಪದವಿ

೧೯೦೯ : ಇಂಗ್ಲಿಷ್ ಸ್ನಾತಕೋತ್ತರ ಪದವಿ; ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರು

೧೯೧೨ (?) : Rhetoric Notes ಪ್ರಕಟಣೆ

೧೯೧೪ : ಇಂಗ್ಲಿಷಿನ ಅಸಿಸ್ಟೆಂಟ್ ಪ್ರೊಫೆಸರ್

೧೯೧೯ : ಇಂಗ್ಲಿಷಿನ ಜ್ಯೂನಿಯರ್ ಪ್ರೊಫೆಸರ್ A Hand Book of Rhetoric ಪ್ರಕಟಣೆ (ಇದು ಸುಮಾರು ೧೯೧೨ರಲ್ಲಿ ಪ್ರಕಟವಾದ Rhetoric Notes ಎಂಬುದರ ಪರಿಷ್ಕೃತ ಆವೃತ್ತಿ)

೧೯೨೧ : 'ಇಂಗ್ಲಿಷ್ ಗೀತಗಳು' ಪ್ರಕಟಣೆ

೧೯೨೩ : ಎರಡನೇ ದರ್ಜೆ ಇಂಗ್ಲಿಷ್ ಪ್ರೊಫೆಸರ್

೧೯೨೫ : 'ಗದಾಯುದ್ಧ ನಾಟಕಂ' ಪ್ರಕಟಣೆ

೧೯೨೬-೩೦ : ಮೈಸೂರು ವಿಶ್ವವಿದ್ಯಾಲಯದ ರಿಜಿಸ್ಟ್ರಾರ್

೧೯೨೭ : ಗೌರವ ಕನ್ನಡ ಪ್ರಾಧ್ಯಾಪಕರು

೧೯೨೮ : ೧೪ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು (ಕಲಬುರ್ಗಿ)

೧೯೨೯ : 'ಅಶ್ವತ್ಥಾಮನ್' ಪ್ರಕಟಣೆ

೧೯೩೦ : ಮೊದಲ ದರ್ಜೆ ಇಂಗ್ಲಿಷ್ ಪ್ರೊಫೆಸರ್

೧೯೩೫ : 'ಪಾರಸಿಕರು' ಪ್ರಕಟಣೆ

೧೯೩೬ : ಕನ್ನಡ ಛಂದಸ್ಸಿನ ಚರಿತ್ರೆ ('ಕನ್ನಡ ಕೈಪಿಡಿ' ಮೊದಲನೇ ಭಾಗದ ಎರಡನೇ ಮುದ್ರಣದಲ್ಲಿ ಸೇರಿದ ಪ್ರಕರಣ)

೧೯೩೮-೪೩ : ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆ: ಮೈಸೂರು ಮಹಾರಾಜರಿಂದ 'ರಾಜಸೇವಾಸಕ್ತ' ಬಿರುದು; 'ಕನ್ನಡ ನುಡಿ' ನಿಯತಕಾಲಿಕದ ಆರಂಭ; 'ಕನ್ನಡ ಬಾವುಟ' ಪ್ರಕಟಣೆ (ಸಂಪಾದಿತ ಸಂಕಲನ)

೧೯೩೯ : ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅಚ್ಚುಕೂಟದ ಸ್ಥಾಪನೆ

೧೯೪೦ : ಪರಿಷತ್ತಿನ ಸಾಹಿತ್ಯ ಪರೀಕ್ಷೆಗಳ ಆರಂಭ

೧೯೪೧ : 'ಸಂಭಾವನೆ' ಕನ್ನಡದ ಮೊದಲ ಸನ್ಮಾನ ಗ್ರಂಥದ ಸಮರ್ಪಣೆ

೧೯೪೨ : ವಿಶ್ವವಿದ್ಯಾನಿಲಯದ ಸೇವೆಯಿಂದ ನಿವೃತ್ತಿ; ವಯಸ್ಕರ ಶಿಕ್ಷಣ ಸಮಿತಿ ಅಧ್ಯಕ್ಷರು

೧೯೪೩ : 'ಹೊಂಗನಸುಗಳು' ಪ್ರಕಟಣೆ

೧೯೪೪ : ಧಾರವಾಡದ ಕಲಾ ಕಾಲೇಜಿನಲ್ಲಿ (ಈಗಿನ ಜೆ.ಎಸ್.ಎಸ್, ಕಾಲೇಜು) ಪ್ರಿನ್ಸಿಪಾಲ್

೧೯೪೬ : ಧಾರವಾಡದಲ್ಲಿ ಜನವರಿ ೫ರಂದು ಮರಣ

೧೯೪೭ : ಕನ್ನಡ ಸಾಹಿತ್ಯ ಚರಿತ್ರೆ (ಕನ್ನಡ ಕೈಪಿಡಿಯ ಎರಡನೆ ಭಾಗ) ಪ್ರಕಟಣೆ

೧೯೪೮ : 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', 'ಇಸ್ಲಾಂ ಸಂಸ್ಕೃತಿ' (ಮಹಮ್ಮದ್ ಅಬ್ಬಾಸ್‌ಷೂಸ್ತ್ರಿ ಅವರ ಗ್ರಂಥದ ಅನುವಾದ)

೧೯೮೦ : ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

ರಾಷ್ಟ್ರಕವಿ ಡಾ|| ಕುವೆಂಪು ಅವರಿಂದ ಉದ್ಘಾಟನೆ

೧೯೮೩ : 'ಶ್ರೀ ಸಾಹಿತ್ಯ' ಸಮಗ್ರ ಕೃತಿ ಸಂಪುಟದ ಪ್ರಕಟಣೆ

೧೯೮೪ : ಶತಮಾನೋತ್ಸವ ವರ್ಷ

## ಬಿ. ಎಂ. ಶ್ರೀ. ವ್ಯಕ್ತಿ ಮತ್ತು ಸಾಹಿತ್ಯ ಕುರಿತ ಕೃತಿಗಳು

೧೯೪೧ : ಸಂಭಾವನೆ (ಸಂ) : ಮಾಸ್ತಿ ವೆಂಕಟೇಶ ಅಯ್ಯಂಗಾರ್

೧೯೪೬ : ಅಶ್ವತ್ಥಾಮನ್ : ವಿ. ಸೀತಾರಾಮಯ್ಯ

೧೯೪೬ : ಕಾಣಿಕೆ : ವಯಸ್ಕರ ಶಿಕ್ಷಣ ಸಮಿತಿ, ಮೈಸೂರು

೧೯೪೬ : ಹಿಡಿಹೂ : (ಸಂ) ಎಂ. ವಿ. ಸೀತಾ-
ರಾಮಯ್ಯ, ಸತ್ಯಶೋಧನ ಪ್ರಕಟ-
ಮಂದಿರ, ಬೆಂಗಳೂರು

೧೯೪೯ : ಭಾಷಣಗಳು ಲೇಖನಗಳು : ಎ. ಆರ್. ಕೃ.

೧೯೫೪ : ಅಶ್ವತ್ಥಾಮನ್ : ಒಂದು ಹಕ್ಕಿನೋಟ
ಎನ್ ಅನಂತರಂಗಾಚಾರ್

೧೯೫೮ : ಸಮಾಲೋಕನ : ತೀ. ನಂ. ಶ್ರೀ.

೧೯೬೩ : ಕನ್ನಡ ಸಾಹಿತ್ಯದ ಇತಿಹಾಸ : ರಂ.ಶ್ರೀ. ಮುಗಳಿ

೧೯೭೧ : ಬಿ. ಎಂ. ಶ್ರೀಕಂಠಯ್ಯ : ಬಿ. ಶ್ರೀ
ಪಾಂಡುರಂಗರಾವ್

೧೯೭೨ : B.M. Srikantia : S.V. Ranganna

೧೯೭೪ : B. M. Srikantayya : A. N
Moorthy Rao

೧೯೭೫ : ಬಿ. ಎಂ. ಶ್ರೀಕಂಠಯ್ಯ : ಎ. ಎನ್
ಮೂರ್ತಿರಾವ್

೧೯೭೫ : ಬಿ.ಎಂ.ಶ್ರೀಕಂಠಯ್ಯ : ಎಸ್. ಚನ್ನಪ್ಪ

೧೯೮೦ : ಬಿ. ಎಂ. ಶ್ರೀ. ಬದುಕು ಬರಹ : ಕನ್ನ
ಸಾಹಿತ್ಯ ಪರಿಷತ್ತಿನ ಪ್ರಕಟಣೆ

---

" ಡಿಳ್ಳಿ ನನಗೆ ಬಲುದೂರ, ಕನ್ನಡ ನಾಡಿನಹಳ್ಳಿ ನನಗೆ ಸಾಕು . . .
ಅದೇ ನನ್ನ ದೀಕ್ಷೆ, ನನ್ನ ವ್ರತ, ನನ್ನ ನೋಂಪಿ."



ಧಾರವಾಡದಲ್ಲಿ 'ಶ್ರೀ'ಯವರ ಅಂತ್ಯ

# ಶ್ರೀ ಅವರ ಕೊನೆಯ ನಿಮಿಷಗಳು

* ಪ್ರೊ|| ರಾ. ಯ. ಧಾರವಾಡಕರ್

"ಋತವೊಂದೆ ಗೆಲ್ಲುವದು, ಅನೃತವಮಲ್ತು ;
ಅಮೃತಮೆನೆ ವಿದ್ಯೆಯೆ ; ಅವಿದ್ಯೆಯಲ್ತು ;
ವಿಶ್ವಭಾರತಿ ಶರಣು, ಕಿರುತೀರ್ಥವಲ್ತು".

—ಶುಕ್ರಗೀತೆ

ದಿವಂಗತ ಪ್ರಿನ್ಸಿಪಾಲ್ ಶ್ರೀಕಂಠಯ್ಯನವರ ಜೀವಂತಧ್ವನಿಯನ್ನು ಕೊನೆವರೆಗೂ ಕೇಳಿ, ಅವರ ತುಂಬು ಆಶೀರ್ವಾದವನ್ನು ಶಿರದಲ್ಲಿ ಧರಿಸುವ ಪುಣ್ಯ ಪ್ರೊ. ಮುಗಳಿ ಅವರ ಮತ್ತು ನನ್ನದಾಗಿತ್ತು.

ಆ ಶನಿವಾರ (ತಾ|| ೫-೧-೧೯೪೬) ಮುಕ್ಕಾಲು ಗಂಟೆಯವರೆಗೂ ಶ್ರೀಯವರು ಮಾತನಾಡಿದರೂ ಎಲ್ಲಿಯೂ ಅವರ ಧ್ವನಿ ಕುಂದಲಿಲ್ಲ; ಉತ್ಸಾಹ ಕಡಿಮೆಯಾಗಲಿಲ್ಲ. ಎಂದಿನಂತೆ ಅವರದೇ ಮಾತಿನ ಪ್ರಮುಖ ಪಾತ್ರ. ಅದೇ ಆ ಗಾಂಭೀರ್ಯ, ಅದೇ ಅಂತಃಕರಣ, ಅದೇ ತೇಜಸ್ಸು, ಅದೇ ಹೃದಯಸ್ಪರ್ಶಿಯಾದ ಜೇನುನುಡಿ, ಅದೇ ಕೆಂಠಶ್ರೀ. ಇವೆಲ್ಲ ಇನ್ನೂ ಕಿವಿಯಲ್ಲಿ ಕಟ್ಟಿದಂತಿವೆ.

ನಾವು ಅವರಲ್ಲಿ ಹೋದಾಗ 'ಶ್ರೀ' ಅವರು ಕಾಟಿನ ಮೇಲೆ ಒರಗಿಕೊಂಡಿದ್ದರು. ಆ ಕಡೆಗೆ ಶ್ರೀಮನ್ಮಹಾರಾಜರವರ ಭಾವಚಿತ್ರ, ಎದುರಿಗೆ ಕನ್ನಡನಾಡಿನ ಭೂಪಟ, ಈಚೆ ಶುಚಿಸ್ಮಿತ ಭಗವಾನ್ ಬುದ್ಧದೇವನ ಸುಂದರ ವಿಗ್ರಹ ಎಂದಿನಂತೆ ಶೋಭಿಸುತ್ತಿದ್ದವು.

ನಾವು ಹೋದ ಕ್ಷಣ ಎಂದಿನಂತೆ ಅದೇ ಆತ್ಮೀಯತೆಯಿಂದ 'ಶ್ರೀ' ಪ್ರಾರಂಭಿಸಿದರು.

ಶ್ರೀ—ಅದೇ ತಾವೆಲ್ಲ ಮದರಾಸಿಗೆ ಹೋಗಿರಬಹುದು ಅಂತ ತಿಳಿದಿದ್ದೆ. ದಿನಾಲು ಪೇಪರಿನಲ್ಲಿ ನೋಡ್ತಾ ಇದ್ದೆ. ಬೇಂದ್ರೆ ಅವರ ಹೆಸರು ಮಾತ್ರ ಕಂಡು ಬಂತು. ತಾವು ಹೋಗಿರಲಿಲ್ಲ ಅಂತ ಈಗ ತಿಳಿಯಿತು. ಗೋಕಾಕನೂ ಹೋಗಿರಲಿಲ್ಲವೊ ?

(ಗೋಕಾಕರ ವಿಷಯ ಮಾತಾಡುವಾಗ ಶ್ರೀಯವರು ಯಾವಾಗಲೂ ಆತ್ಮೀಯತೆಯ ಏಕವಚನದಲ್ಲಿ ಹೇಳು

ತ್ತಿದ್ದರು. ಎಷ್ಟೋ ಸಲ ಅವರ ಅಂತಃಕರಣ ತುಂಬಿ ಬಂದುದೂ ಉಂಟು)

ಮುಗುಳಿ—ಇಲ್ಲ.

ಶ್ರೀ—ಅದೇ ಆಗಿರಲಿಕ್ಕಿಲ್ಲ; ನನಗೂ ಹೈದರಾಬಾದಿಗೆ ಬಾ ಅಂತ ಮೂರು ನಾಲ್ಕು ಸಲ ಬರೆದಿದ್ದ....ಎಲ್ಲಿ ? ....ನನ್ನ ಪ್ರಕೃತಿ....ನಾನು ಎಷ್ಟು ಎಷ್ಟು ಯತ್ನ ಮಾಡಿದರೂ ಸಾಧ್ಯವಾಗುವುದಿಲ್ಲ. ಅದಕ್ಕೆ ಕ್ಷಮಿಸಿಬಿಡು ಅಪ್ಪ ಅಂತ ಬರೆದಿದ್ದೆ. ಅಷ್ಟೆಲ್ಲ ಓಡಾಡಿಕೊಂಡು ಬರುವುದು ಈಗ ಎಲ್ಲಿ ಸಾಧ್ಯ ?

ಮು—ತಮಗೂ ಈ ನಾಡಹಬ್ಬದ ಓಡಾಟ ಹೆಚ್ಚಾಗಿರಬೇಕು........

ಶ್ರೀ—ಹಾಗೇನೂ ಇಲ್ಲ; I stood the exertion quite one and a half months· ಇಷ್ಟೇ, ಅದರಿಂದ ಸಾಹಿತ್ಯ ಸಮ್ಮೇಳನ ಅದು ಸಾಧ್ಯವಾಗಲಿಲ್ಲ.

ಮು—ಹೌದು.

ಶ್ರೀ—ಸಮ್ಮೇಲನ ಬಂದು ಈ ಸಲ ಶೀರ ಒಳ್ಳೆಯದಾಯಿತು. ಮಾಸ್ತಿ ಮತ್ತೆ ಬಂದರು. ಅದು ತುಂಬಾ ಸಂತೋಷದ ವಿಷಯ....nonliterary ಜನ ಅಲ್ಲಿ ಸರಿ ಅಲ್ಲ. ಅಂಥಲ್ಲಿ ಓದಿದವರು ಬೇಕು. ಮಾಸ್ತಿ ಪುನಃ ಬಂದದ್ದು ಬಹಳ ಸಂತೋಷ.

ಮು—ಹೌದು. ಅವರೂ ಒಪ್ಪಿಕೊಂಡದ್ದು ಶೀರ ಒಳ್ಳೆಯದಾಯಿತು. ಅವರೂ ಬೇಜಾರುಗೊಂಡಿದ್ದರೆ ಶೀರ ಕಠಿಣವಾಗುತ್ತಿತ್ತು.

ಶ್ರೀ—ಸರಿಯೇ; ರೇವಣ್ಣ ಕೋಶಾಧ್ಯಕ್ಷ ಅಂತ ಕಾಣುತ್ತೆ....ಎಲ್ಲ ಒಳ್ಳೆಯದಾಯಿತು. ನಮ್ಮ ನಾಡು ಬೆಳೆಯಬೇಕು; ನೋಡಿ, ನಮ್ಮ ಜನ ಇನ್ನೂ ಎಷ್ಟೋ ವಿಷಯ ಕಲಿಯಬೇಕು. ನಮ್ಮಲ್ಲಿದ್ದ ಲೋಪಗಳನ್ನೇ ನೋಡ್ತಾರೆ ವಿನಾ merits ಕಾಣೋಕಿಲ್ಲ. ಅವುಗಳನ್ನೇ ದೊಡ್ಡದು ಮಾಡಿ ಹತ್ತು ಜನರೆದುರಿಗೆ ಅಂದು ಬಿಡುತ್ತಾರೆ. ಇದರಲ್ಲಿ ಯಾವ ಪುರುಷಾರ್ಥ ?

ನಾನು ಇಲ್ಲಿ ಬಂದದ್ದು ಹೀಗೇನೇ. ನಾನಿಲ್ಲಿ ಬಂದದ್ದರಿಂದ ನಿಮಗೆಲ್ಲ ಆನಂದವಷ್ಟೇ ?....

ಮು—ಅಯ್ಯೊ ! ಎಂಥಮಾತು ! ತಮ್ಮಂಥ ಹಿರಿಯರು ಬಂದದ್ದು ಕಡಿಮೆ ಮಾತೇ ? ಇಷ್ಟೇ ತಮ್ಮ ಆಶೀರ್ವಾದ ಫಲಿಸಬೇಕು....

ಶ್ರೀ—ಅದೇ; ನಾನೂ ಇಲ್ಲಿ ಮೊದಲು ಬರೀ ಒಂದು ವರುಷ ಇರೋಣ ಅಂತ ಬಂದಿದ್ದೆ. ಆದರೆ ಈಗ ಕೆಲವು ದಿವಸ ಇಲ್ಲಿಯೇ ನಿಲ್ಲಬೇಕು ಎನಿಸುತ್ತೆ.

ಮು—ತಮಗೆ ಧಾರವಾಡದ ಹವೆ ಸ್ವಲ್ಪ ಸೆಕೆ ಎನಿಸಬಹುದು.

ಶ್ರೀ—ಹಾಗೇನೂ ಇಲ್ಲ....ಹೋದ ಸಲ ನೋಡಿ ಇಲ್ಲೆ ಇದ್ದೆ. ಸ್ವಲ್ಪ heat en ಅಷ್ಟೇ! ....oh! Dharwar climate has agreed to my health very well! ....ನಾನೂ ನೋಡಿ, ನಾಳೆ ಸೋಮವಾರದಿಂದ ಕ್ಲಾಸು ತೆಗೆದುಕೊಳ್ಳೋಣ ಎಂದೆ. ಡಾಕ್ಟರರು ಬೇಡ ಅಂದರು. No; I must speak to my students on Monday;.......I will· ಈ ಹೊತ್ತು ಡಾ|| ಕಬ್ಬೂರ ಬರ್ತೀನಿ ಅಂತ ಹೇಳಿದ್ದಾರೆ.

ಮು—ಏನು ಇಷ್ಟು ಅವಸರ ? ಇನ್ನೂ ಸ್ವಲ್ಪ ಆರಾಮು ತೆಗೆದುಕೊಳ್ಳಬಹುದಲ್ಲ ?

ಶ್ರೀ—No; I am quite hale and hearty. I should not play truant ಈಗ ಯಾವ troubles en ಇಲ್ಲ. ಏನೋ ಸ್ವಲ್ಪ ಅಲ್ಲಲ್ಲಿ....ಸಾಗುತ್ತೆ, ಏನಾದರೂ old rickety machineen· ಸ್ವಲ್ಪ ಆಗಾಗ Oiling ಆದರೆ ಸಾಕು ಪುನಃ ಸಾಗುತ್ತೆ.

ಮು—........

ಶ್ರೀ—........ಆದರೂ ವಿದ್ಯಾರ್ಥಿಗಳು ನೋಡಿ ಇಂಗ್ಲಿಷ್ ಪ್ರೀತಿ ಕಡಮೆ. ನನಗೆ ಹಾಗೆ ಹೇಳಿಯೂ ಬಿಟ್ಟರು. ಅವರಿಗೆ Seminar ಬೇಕಿಲ್ಲ. Association ಮನಸ್ಸು ಹಿಡಿಯದು....Have I come here only to act as a clerk ? — to see records and see that payments are made in time ?....I came here because I had love of my literature ಅದು ಇಲ್ಲದಿದ್ದರೆ ಇಲ್ಲಿ ನನ್ನದೇನು ಕೆಲಸ ? A head clerk can run the collage........you know things ಅಷ್ಟೇ........

ಮು—ಅದೇ ನನ್ನ ಪುಸ್ತಕದ ಬಗ್ಗೆ........

ಶ್ರೀ—ಹೌದು; ಅದೇ ಮಾತು ಹೇಳೋಣ ಅಂತಿದ್ದೆ. ಮಾತು ಮುಸುಳಿಕೊಂಡು ಸುತ್ತುತ್ತಾ ಹಾಗೇ ಬಂತು ನೋಡಿ........ಅದೇ ನನಗೆ ಹೇಳಿದರು. ಈಗ ೯೬ ಪುಟ ಕಳಿಸಿದಾರೆ, ನೋಡಿದೇನೆ. proof mistakes ತುಂಬ್ಬಾ

ಉಳಿದಿವೆ. ಹಾಗೆ ಇರಬಾರದು ನೋಡಿ. (ಶ್ರೀ ಅವರ ಧ್ವನಿಯಲ್ಲಿ ಹಿ ರಿ ತ ನ ದ ಅಧಿಕಾರ ಗಾಂಭೀರ್ಯ ತುಂಬಿದ್ದವು.)

ಮು—ಸ್ವಲ್ಪ ಅವಸರವಾಯಿತು. ನನ್ನಲ್ಲಿ ತರಿಸಿ proof ನೋಡುವುದೂ ಅಂದರೆ ತಡವಾಗಬಹುದು ಅಂತ....

ಶ್ರೀ—ಅದು ಹಾಗೆ ಆಗಬಾರದು ನೋಡಿ. ಪುಸ್ತಕದಲ್ಲಿ ಹಾಗೆ mistakes ಉಳಿಯಕೂಡದು. ಅದರಲ್ಲಿಯೂ ಈ ಕ್ಲಾಸಿಕಲ್ works ಇವನಲ್ಲಿ ಒಂದು ಕೂಡ ಉಳಿಯಬಾರದು. ಗಂಭೀರ ಪುಸ್ತಕಗಳನ್ನು ಹಾಗೆ ಮುದ್ರಿಸಿದರೆ ಹೇಗೆ? ಅದರಲ್ಲಿಯೂ ನಾವು ಅವನ್ನ ನೋಡಬೇಕು.

(ತಪ್ಪಿತಸ್ಥರನ್ನು ದಾರಿಗೆ ತರುವ
ರೀತಿಯಿದ್ದಿತು ಆ ವಾಣಿಯಲ್ಲಿ).

ಮು—ತಾವು ಮೊದಲಿನಿಂದಲೂ ಗದಾಯುದ್ಧದ close student. ತಮ್ಮ ಆಶೀರ್ವಾದ ಈ ಪುಸ್ತಕಕ್ಕಿರಬೇಕು ಅಂತ.

ಶ್ರೀ—ಓ! ನಾನೇನು ವಿಶೇಷ ಬರೆಯುವುದಿದೆ? ತಾವು ಈಗ closer studentಉ. ನನ್ನ ಕಾಲ ಬೇರೆ. ನಾವೆಲ್ಲ ಕನ್ನಡ ಕಲಿಸುವ ಸೌಭಾಗ್ಯ ಉಳ್ಳವರು. ತಮ್ಮ ಹಾಗೆ ನನಗೆ ಹೇಗೆ ಬಂದೀತು? ....ಒಂದು ವಿಷಯ ನೋಡಿ ಮುಗಳಿ. ಈ ರೀತಿ ನೋಡಿದರೆ, I must frankly state it now. ನಾವೆಲ್ಲ ಮಾಡಿದ ಕನ್ನಡ ಕೆಲಸ ಒಂದು ರೀತಿ ಎಡಗೈಯಿಂದದು=left=handed work. ಯಾಕೆಂದರೆ, I had to keep up my pres= tige with other Eng. Profs. ಅದ್ದರಿಂದ as an indian against Englishmen ಪ್ರತಿ ಹೊಸ ಪುಸ್ತಕ ದಿನಾಲು ಓದಬೇಕಿತ್ತು. ಎಲ್ಲಾ ವಿಷಯ ಅಷ್ಟೇ ಅನ್ನಿ. ಹೀಗಾಗಿ I could not devote my all to Kannada Course ....ಶಾರದಾ, ಮುಗಳಿ ಬಂದಿದಾರೆ ಏನು ಕೊಡತೀಯವ್ವಾ (ಎಂದು ಬಾಗಿಲದಲ್ಲಿ ನಿಂತಿದ್ದ ಶಾರದಮ್ಮನವರನ್ನು ಕೇಳಿದರು. Teaಗೆ ಇಟ್ಟಿದ್ದೇನೆ ಕೊಡುತ್ತೇನೆ. ಎಂದು ಅವರು ಹೇಳಿದರು.)

ಶ್ರೀ—ಆ ಏನು ಇನ್ನೂ ಇಟ್ಟಿದೀಯಾ? ಹಾಗಾದರೆ ಎಂದು ಬರುವದು ನಾಡದು ತಾನೆ? (ನಾವೆಲ್ಲರೂ ನಕ್ಕೆವು. ತಾವೂ ನಕ್ಕರು ವೇಳೆ ೨=೩೫ ಆದ್ದರಿಂದ ನಾವು ಹೊರಡಬಹುದೆಂದು ಪ್ರೊ|| ಮುಗಳಿ ಅವರ ಕಡೆಗೆ ನಾನು ನೋಡಿದೆ. ಅಷ್ಟರಲ್ಲಿ ಚಹ ತಿನಿಸು Table ಮೇಲೆ ಸಿದ್ಧವಾಗಿತ್ತು. ನಾವು ತೆಗೆದುಕೊಳ್ಳುತ್ತಿರುವಾಗಲೇ ಶ್ರೀ ಅವರು ಪ್ರಾರಂಭಿಸಿದರು. ಮಾತು ಕಾಂಗ್ರೆಸಿನ ಕಡೆಗೆ ಹೊರಟಿತ್ತು.)

ಶ್ರೀ—ಕಾಂಗ್ರೆಸಿನಲ್ಲಿ ಎಲ್ಲವೂ ಸಮ್ಮತವಾಗದು. rank and file ಇದೆ ನೋಡಿ. ಎಷ್ಟೋ ವಿಷಯ ನಾವು ನಿರ್ದಾಕ್ಷಿಣ್ಯವಾಗಿ ಹೇಳಲೇಬೇಕು. ವಿದ್ಯಾರ್ಥಿಗಳಿಗೂ ಎಷ್ಟೋ ವಿಷಯ ತಿಳಿಯಬೇಕು. ಮೊನ್ನೆ ನಮ್ಮ ಕಾಲೇಜಿನಲ್ಲೇ ನಡೆದ ವಿಷಯ. ಆ ಸಮಾರಂಭಕ್ಕೆ ಕಾಲೇಜ ಧ್ವಜ ಹಚ್ಚಲಾಗಿತ್ತು. ಸಭೆಯು ಒಂದು ನಿಮಿಷ ಮೊದಲು ಬಂದು ಒಬ್ಬ ವಿದ್ಯಾರ್ಥಿ ಹೇಳ್ತಾನೆ: ಇಲ್ಲಿ ಇದನ್ನು ತೆಗೆದು ಕಾಂಗ್ರೆಸ್ ಧ್ವಜ ಹಾರಿಸಬೇಕೆಂದು....ಮಾತು ಎಲ್ಲಿಗೆ ಬಂತು ನೋಡಿ. we love all flages. ಆದರೆ institu tional love ಇಲ್ಲವೇ ಇಲ್ಲವೆ? ಒಂದನ್ನು ತೆಗೆದು ಮತ್ತೊಂದೇಕೆ? I love my institution most. ದೇಶದ ಮಾನ, ಗೌರವ ಅದಕ್ಕೂ ಇರಬೇಕು. you ask prof. Dharwadakar how he had to manage the whole thing. ನಮ್ಮಲ್ಲಿ ಬಂದಿರುವ ವಿಷಯವೂ ಅಷ್ಟೇ. people who do not know us, who do not know our problems=ಬರ್ತಾರೆ; ಏನಾದರೂ ಹೇಳಿ ಹೋಗಿಬಿಡ್ತಾರೆ. young minds should not be twisted (?) that way. ಮೊನ್ನೆ ಪಟ್ಟಾಭಿ ಮಾತೂ ಅಷ್ಟೆ. I have talked the matter up and down the country. ಬರಿಯ fascist ರೀತಿ ಪ್ರಯೋಜನವಿಲ್ಲ. ನಮ್ಮ ತೋಟದಲ್ಲಿ ಕಳೆ ತುಂಬಿದಾಗ, ನಮ್ಮ ತಾಯಿ ದೈನ್ಯದಲ್ಲಿದ್ದಾಗ, ನಮ್ಮ ಜನ ನರಳುತ್ತಿರುವಾಗ, ಬೇರೆಯವರ ತೋಟದ ಗೊಡವೆ ನಮಗೇಕೆ? ಸಮದೃಷ್ಟಿ ತೂಕಬೇಕು. ನಾಲ್ಕು ಜನ ನನ್ನ ಮಾತು ಮೆಚ್ಚಲಿಲ್ಲ. ಆದರೆ ನಾನು ಸತ್ಯ ಹೇಳಲೇಬೇಕು. ನನ್ನನ್ನು ಅನೇಕ ಜನ ಟೀಕಿಸಿದರು =ಆದರೆ, I 'must have liberty of my own opinion. I must have my place under the sun. ಜನ ಲೆಕ್ಕಿಸಲಿಲ್ಲ. ಆದರೆ ಈ values ಕೊನೆವರೆಗೆ ನಿಲ್ಲದು ನೋಡಿ....

ಶ್ರೀ ಅವರು ಇನ್ನೂ ಮಾತಾಡುವುದರಲ್ಲಿದ್ದರು. ಆದರೆ ವೇಳೆ ೨=೪೨ ಆದದ್ದರಿಂದ ನಾವು ಹೊರಡುವದಾಗಿ ನಮಸ್ಕರಿಸಿ ನಾನು ಹೊರಟೆನು. 'ಸೋಮವಾರ class ಲಕ್ಷ್ಯದಲ್ಲಿರಲಿ' ಎಂದರು. ನಾನು ವಿದ್ಯಾರ್ಥಿಗಳಿಗೆ ಆ ರೀತಿ ತಿಳಿಸುವದಾಗಿ ಹೇಳಿ ಮುಂದು ಹೊರಟೆ. ಮುಗಳಿ ಅವರೂ ಎದ್ದು ನಮಸ್ಕರಿಸಲು ಹೊರಟರು. ಶ್ರೀ—ಅವರು

ಅವರಿಗೆ ಹಾಗೆ ಮಾಡಗೊಡದೆ, ತಾವೇ ಸ್ವಲ್ಪ ಸರಿದು ಕೈ ಕುಲುಕಿ 'ಹೋಗಿ ಬನ್ನಿ ಮುಗಳಿ ಹೋಗಿ ಬನ್ನಿ; ತಾವು ಬಂದದ್ದು ತುಂಬಾ ಸಂತೋಷ. ಹೋಗಿ ಬನ್ನಿ ಅಪ್ಪಾ, ತುಂಬಾ ಸಂತೋಷ' ಎಂದು ಬೀಳ್ಕೊಂಡು ಪುನಃ ಮಲಗಿದರು. ಅಮ್ಮಾ ಎಂದು ಶಾಲು ಸರಿಪಡಿಸಿಕೊಂಡಂತೆ ಕೇಳಿಸಿತು. ನಾವು ೧೫-೨೦ ಹೆಜ್ಜೆ ಬರುವುದರಲ್ಲಿಯೇ ಧ್ವನಿ ಕೇಳಿಸಿತು, "ಮುಗಳಿ, ಧಾರವಾಡಕರ ತೀವ್ರ....ಬನ್ನಿ" ಎಂದು. ನಾವು ಧಾವಿಸಿ ಹೋದೆವು. ಶ್ರೀ ಅವರು ಮಲಗಿ ದಂತಿತ್ತು. ಈಗ ಅರೆಕ್ಷಣದ ಹಿಂದೆ ತುಂಬು ಹೃದಯದ ಸಂತೋಷದಿಂದ ಬೀಳ್ಕೊಂಡ ಶ್ರೀ ಅವರು ಹೀಗೇಕೆ ಎಂದು ನನಗೆ ಗಾಬರಿಯಾಯಿತು. ಬಹುಶಃ ಅಶಕ್ತತೆಯಿಂದ ಮೂರ್ಛೆ ಹೋಗಿರಬೇಕು ಎನಿಸಿತು. ಕೈ ಹಿಡಿದು ನೋಡಿದೆ, ತಣ್ಣಗಿತ್ತು. ಕಾಲೂ ತಣ್ಣಗಿತ್ತು. ತುಂಬಾ ಹೆದರಿದೆ. ಮುಗುಳಿ ಅವರೆದುರು ಡಾಕ್ಟರನ್ನು ಕರೆತರುವ ದಾಗಿ ಹೇಳಿ ಡಾಕ್ಟರಲ್ಲಿ ಓಡಿದೆ. ಅವರು ಬಂದು ನೋಡಿ ಉತ್ಸಾಹ ಹೀನರಾದರು. "ಡಾ|| ಕಬ್ಬೂರ ಅವರಿಗೂ ಹೇಳಿ ಕಳಿಸಿ" ಎಂದರು. ನಾನೇ ಹೋಗಿ ಕರೆತಂದೆ. ಅವರ ಮುಖವೂ ಸ್ವಲ್ಪ ವಿವರ್ಣವಾದಂತೆ ಕಂಡಿತು. ಅವರಲ್ಲಿಯೂ ಉತ್ಸಾಹ ಕಾಣಲಿಲ್ಲ. ಶ್ರೀ ಅವರ ಜೀವನಶ್ರೀ ಮುಗಿದಿತ್ತು. ನಾಡಿನ ಸಾಂಸ್ಕೃತಿಕ ರಾಯ ಭಾರಿ ಕೊನೆಯ ಉಸಿರನ್ನು ಎಳೆದಿದ್ದರು. ಕನ್ನಡದ ರಸಋಷಿ ಪರಿವ್ರಾಜಕ—ಇಲ್ಲದಾಗಿದ್ದರು.

(೧೯೪೭ ಜನವರಿ ೩೧ರ ಕನ್ನಡ ನುಡಿ ಸಂಚಿಕೆಯಿಂದ)

---

[೩೧ನೇ ಪುಟದಿಂದ]

ಜಿಲ್ಲಾ ಸಮಿತಿಗಳಿಗೆ ಸಂಬಂಧಪಟ್ಟಂತೆ ಹೇಳುವು ದಾದರೆ, ಬಿ. ಎಂ. ಶ್ರೀ. ಅವರ ಕನಸನ್ನು ನನಸಾಗಿ ಮಾಡು ವಲ್ಲಿ ಹಿಂದಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಹಾಗೂ ಇಂದಿನ ಅಧ್ಯಕ್ಷ ಶ್ರೀ ಹಂಪನಾ ಯಶಸ್ವಿಯಾಗಿದ್ದಾರೆ.

೧೨. ಪರಿಷತ್ತಿಗೆ ಶ್ರೀಯವರ ದಾನ: ಪರಿಷತ್ತಿನ ಪ್ರಕಟನೆಗಳು—ಕನ್ನಡ ನುಡಿ, ಪರಿಷತ್ ಪತ್ರಿಕೆ ಮತ್ತು ಇತರ ಗ್ರಂಥ ಪ್ರಕಟನೆಗಳು ಪರಿಷತ್ತಿನಲ್ಲಿಯೇ ಮುದ್ರಣ ವಾಗಬೇಕು ಎಂಬ ಘನವಾದ ಉದ್ದೇಶದಿಂದ 'ಶ್ರೀ' ಅವರು ಅಚ್ಚುಕೂಟದ ಸ್ಥಾಪನೆಗೆ ಆರು ಸಾವಿರ ರೂಪಾಯಿಗಳನ್ನು ದಾನ ಮಾಡಿದರು. ಹಾಗೂ ಗಮಕ ಕಲೆಯ ಪುರೋಭಿವೃದ್ಧಿಗಾಗಿ ಏರ್ಪಟ್ಟದ್ದ ನಿಧಿಗೆ ಒಂದು ಸಾವಿರ ರೂಪಾಯಿಗಳನ್ನು ದಾನ ಮಾಡಿದರು. ಅಂತೂ ಒಟ್ಟು ೭,೦೦೦ ರೂಪಾಯಿಗಳನ್ನು ದಾನ ಮಾಡಿದರು.

೧೩. ಪರಿಷತ್ತಿಗೆ ಸದಸ್ಯ ಸಂಪತ್ತು: ಸದಸ್ಯ ಸಂಪತ್ತನ್ನು ಹೆಚ್ಚಿಸುವ ಸಲುವಾಗಿಯೂ ತಮ್ಮ ಆರೋಗ್ಯ ವನ್ನು ಬಲಿಕೊಟ್ಟು ನಾಡನ್ನೆಲ್ಲಾ ಸುತ್ತಾಡಿದರು. ಕನ್ನಡ ಭಾಷೆ ಸಾಹಿತ್ಯಗಳ ಹಳಮೆ-ಹಿರಿಮೆಗಳನ್ನು ಸಾಮಾನ್ಯ ಜನಕ್ಕೆ ತಿಳಿಯುವ ಹಾಗೆ ತಮ್ಮ ವಾಗ್ಝರಿಯನ್ನು ಹರಿಸಿದರು.

ಮೈಸೂರು ವಿಶ್ವವಿದ್ಯಾನಿಲಯದ ಮೂಲಕ, ಪರಿಷತ್ತಿನ ಮೂಲಕ ಕನ್ನಡದ ಕೀರ್ತಿಧ್ವಜವನ್ನು ಎತ್ತಿ ಹಿಡಿದ ಈ ಮಹಾನುಭಾವರನ್ನು ನಮ್ಮ ಜನ ಅವರು ತೀರಿಕೊಂಡಮೇಲೆ ಮರೆತೇಬಿಟ್ಟಿತು. ಮಾಸ್ತಿಯವರು ಉಪಾಧ್ಯಕ್ಷರಾದ ಕೂಡಲೆ ಅವರ ಸ್ಮಾರಕ ಒಂದನ್ನು ನಿರ್ಮಿಸಬೇಕೆಂದು ಕನ್ನಡಿಗರಿಗೆ ಕರೆ ಕೊಟ್ಟರು. ಅವರ ಕರೆಗೆ ನಾವು ಓಗೊಡಲಿಲ್ಲ.

ಈಗ ಅವರ ಜನ್ಮಶತಾಬ್ದಿ ವರ್ಷದಲ್ಲಿಯಾದರೂ ಅವರನ್ನು—ಆ ಪುಣ್ಯ ಪುರುಷನನ್ನು, ಸ್ಮರಿಸುವ ಭಾಗ್ಯ ನಮ್ಮ ಪಾಲಿಗೆ ಒದಗಿ ಬಂದಿದೆ. ಕನ್ನಡ ನಾಡಿನ ಎಲ್ಲ ಕಾರ್ಯ ಕ್ಷೇತ್ರಗಳಲ್ಲಿಯೂ ಈ ಶತಾಬ್ದಿ ವರ್ಷದಲ್ಲಿ ಕನ್ನಡಕ್ಕೆ ಅಗ್ರಸ್ಥಾನ ದೊರೆಯುವಂತೆ ನಾವು ಶ್ರಮಿಸಿ ಜಯ ಗಳಿಸಿದೆವಾದರೆ ಅದಕ್ಕಿಂತಲೂ ದೊಡ್ಡ ಸ್ಮಾರಕವನ್ನು 'ಶ್ರೀ'ಯವರ ಆತ್ಮ ಬಯಸಲಾರದು.

'ಶ್ರೀ' ಯವರ ಕನಸನ್ನು—ಇನ್ನೂ ಪರಿಪೂರ್ಣ ನನಸಾಗದ ಕನಸನ್ನು—ನನಸನ್ನಾಗಿ ಮಾಡುವ ಪ್ರತಿಜ್ಞೆ ಯನ್ನು ಕನ್ನಡಿಗರು ಕೈಗೊಳ್ಳಲಿ, ಅವರು ಕಟ್ಟಿಕೊಂಡ ಕನಸೆಲ್ಲ ನನಸಾಗಲಿ ಎಂದು ಹಾರೈಸುತ್ತೇನೆ.

---

" ಕಡೆಗೆ ಉಳಿಯುವುದು ಅಭಿಮಾನವಲ್ಲ, ಸತ್ಯ."



ಕುಳಿತಿರುವವರು ೨ನೆಯವರು ತೀ. ನಂ. ಶ್ರೀ., ಶ್ರೀ., ತಳುಕಿನ ವೆಂಕಣ್ಣಯ್ಯ, ಡಿ. ಎಲ್. ಎನ್. (ಮಹಾರಾಜ ಕಾಲೇಜಿನಲ್ಲಿ)



'ಶ್ರೀ' ಅವರ ಮಗ
ಶ್ರೀ ತಮ್ಮಯ್ಯ ಅವರು






'ಶ್ರೀ'ಯವರ ತಂಗಿ
ಶ್ರೀಮತಿ ಕಾವೇರಮ್ಮ ಅವರು



'ಶ್ರೀ' ಅವರ ಹಿರಿಯ ಮಗಳು
ಶ್ರೀಮತಿ ಶಾರದಮ್ಮ ಅವರು



'ಶ್ರೀ' ಅವರ ಕಿರಿಯ ಮಗಳು
ಶ್ರೀಮತಿ ತಂಗಮ್ಮ ಅವರು



ಶ್ರೀಮತಿ ತಂಗಮ್ಮನವರ ಪತಿ
ಶ್ರೀ ಎಸ್. ಬಿ. ಎಸ್. ರಾವ್ ಅವರು



'ಶ್ರೀ' ಯವರ ತಮ್ಮ ಶ್ರೀ ಬಿ. ಎಂ. ಶಿವರಾಮಯ್ಯ, ಶ್ರೀಮತಿ ಮೀನಾಕ್ಷಿ
ಮತ್ತು ಮೊಮ್ಮಗಳು ಬಿನ್ನಾ, ಅವರುಗಳು



('ಶ್ರೀ' ಅವರ ಬಳಗ)

ನೆಲದ ಮೇಲೆ ಕುಳಿತಿರುವವರು: ಶ್ರೀಮತಿಯರಾದ ವಿಶಾಲಾಕ್ಷಿ, ಶಾಂತಾ, ವಿದ್ಯಾ
ಕುರ್ಚಿಯ ಮೇಲೆ: ಶ್ರೀಮತಿಯರಾದ ಪುಷ್ಪ, ತಂಗಮ್ಮ, ಪ್ರಭಾವತಿ, ಗಾಯತ್ರಿ,
ನಿಂತಿರುವವರು: ಶ್ರೀಯುತರಾದ ರವಿ ಗಾಯಕವಾಡ್, ಎಸ್. ಜಿ. ಶ್ರೀಕಂಠಯ್ಯ,
(ಕುಮಾರಿ ನಮ್ರತಾ), ಬಿ. ಕೆ. ರಂಗನಾಥ್.



'ಶ್ರೀ' ಯವರ ಮಗಳು, ಮೊಮ್ಮಕ್ಕಳು, ಮರಿಮಗ



'ಶ್ರೀ' ಅವರ ಬಳಗ



'ಶ್ರೀ' ಅವರೊಡನೆ ಸಿ. ಕೆ. ವೆಂಕಟರಾಮಯ್ಯ, ಬೆಳ್ಳಾವೆ ವೆಂಕಟನಾರಾಯಣಪ್ಪ ಮತ್ತು ರಾಜಸೇವಾಸಕ್ತ ಡಿ. ಸಿ. ಸುಬ್ಬರಾಯಪ್ಪ—ಇವರುಗಳನ್ನು ಕಾಣಬಹುದು.





ಶ್ರೀಮತಿಯರಾದ ಶಾರದಮ್ಮ (ಮಗಳು), ವಿಶಾಲಾಕ್ಷಿ (ಮೊಮ್ಮಗಳು), ಶಾಂತಾ (ಮೊಮ್ಮಗನ ಪತ್ನಿ), ಶ್ರೀ ಶ್ರೀಕಂಠ (ಮರಿಮಗ).



# ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–೧೮

೩–೧–೧೯೮೪ ಮಂಗಳವಾರ ಸಂಜೆ ೬–೩೦ ಗಂಟೆಗೆ

## ಉದ್ಘಾಟನಾ ಸಮಾರಂಭ

ಉದ್ಘಾಟಕರು : ಶ್ರೀ ಜೀವರಾಜ ಆಳ್ವ
ಸಚಿವರು, ಯುವಜನ ಸೇವಾ ಇಲಾಖೆ
ಕರ್ನಾಟಕ ಸರ್ಕಾರ

ವಿಶೇಷ ಸಂಚಿಕೆ
'ಕನ್ನಡ ನುಡಿ' ಬಿಡುಗಡೆ : ಶ್ರೀ ಬಿ. ಎಂ. ಶಿವರಾಮಯ್ಯ ('ಶ್ರೀ'ಯವರ ತಮ್ಮ)

ಉಪನ್ಯಾಸಕರು : ಡಾ|| ಶ್ರೀರಂಗ
ಡಾ|| ಗೊರೂರು ರಾಮಸ್ವಾಮಿ ಅಯ್ಯಂಗಾರ್
ಶ್ರೀ ಕೆ. ಎಸ್. ನರಸಿಂಹಸ್ವಾಮಿ

ಅಧ್ಯಕ್ಷರು : ಶ್ರೀ ಹಂಪ. ನಾಗರಾಜಯ್ಯ

ಶ್ರೀಯವರ ಗೀತೆಗಳ ವಾಚನ : ಶ್ರೀ ಸಿ. ಡಿ. ಮುಸುಸಿಂಹ

ಪ್ರತಿಗಳ ಸ್ವೀಕಾರ : ಡಾ|| ಎಸ್. ಜಿ. ಶ್ರೀಕಂಠಯ್ಯ
ಶ್ರೀಮತಿ ವಿಶಾಲಾಕ್ಷಿ
ಶ್ರೀಯವರ ಮೊಮ್ಮಕ್ಕಳು

ತಾವು ಬನ್ನಿ

ಎಂ. ಪಿ. ದೇವರಾಜ್
ಗೌರವ ಕೋಶಾಧ್ಯಕ್ಷರು

ಲಕ್ಷ್ಮಣ್ ತೆಲಗಾವಿ, ಹೊ. ವೆ. ನಾರಾಯಣಸ್ವಾಮಿ
ಗೌರವ ಕಾರ್ಯದರ್ಶಿಗಳು

# ಹಿಂದುಳಿದವರ ಹಿತರಕ್ಷಣೆ

* ಸರ್ವರಿಗೂ ಸಮಾನ ಅವಕಾಶ; ದೌರ್ಜನ್ಯಗಳಿಂದ ದಲಿತ ವರ್ಗದ ರಕ್ಷಣೆ - ಇದು ಸರ್ಕಾರದ ಗುರಿ.

* ಹರಿಜನ - ಗಿರಿಜನರ ಉದ್ಧಾರಕ್ಕಾಗಿ ನೇಮಕಗೊಂಡ ಹರಿಜನ-ಗಿರಿಜನ ಕಾರ್ಪೊರೇಷನ್ ತೀವ್ರ ಕಾರ್ಯನಿರತ.

* ಹಿಂದುಳಿದ ವರ್ಗದವರಿಗೆ ಶಿಕ್ಷಣ ಮತ್ತು ಸರ್ಕಾರಿ ಸೇವೆಯಲ್ಲಿ ಸೂಕ್ತ ಪ್ರಾತಿನಿಧ್ಯ.

* ದ್ವಿತೀಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಅಲ್ಪಸಂಖ್ಯಾತ ಆಯೋಗಗಳ ರಚನೆ.

* ದಲಿತರ ಮೇಲೆ ಆಗುವ ದೌರ್ಜನ್ಯಗಳನ್ನು ತಪ್ಪಿಸಲು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪೋಲಿಸ್ ಸೂಪರಿಂಟೆಂಡೆಂಟರಿಗೆ ಹೆಚ್ಚಿನ ಅಧಿಕಾರ.

* ಕೋಮು ಗಲಭೆಗಳನ್ನು ಹತ್ತಿಕ್ಕಿ ಸೌಹಾರ್ದತೆಯನ್ನು ಕಾಯಲು ರಾಜ್ಯ ಹಾಗೂ ತಾಲ್ಲೂಕು ಮಟ್ಟದಲ್ಲಿ ಸಮಿತಿಗಳ ರಚನೆ.

ಪ್ರಕಟಣೆ : "ಕರ್ನಾಟಕ ವಾರ್ತೆ"

# ವಿಧವೆಯರಿಗೆ ಮಾಸಿಕ ವೇತನ

* ಈಗಾಗಲೇ ವೃದ್ಧರು ಮತ್ತು ಅಂಗವಿಕಲರ ಜೀವನ ನಿರ್ವಹಣೆಗೆ ಮಾಸಾಶನ ನೀಡುತ್ತಿರುವ ಸರ್ಕಾರ. ಈ ದಿಶೆಯಲ್ಲಿ ಮತ್ತೊಂದು ಹೆಜ್ಜೆ ಮುನ್ನಡೆದಿದೆ.

* ೧೫೦೦ ರೂಪಾಯಿಗಿಂತ ಕಡಿಮೆ ವಾರ್ಷಿಕ ಆದಾಯದ ಎಲ್ಲ ವಿಧವೆಯರಿಗೂ ತಿಂಗಳಿಗೆ ೫೦ ರೂ. ಮಾಸಿಕ ವೇತನ ದೊರೆಯಲಿದೆ.

* ಈ ಮಾಸಿಕ ವೇತನವು ಅಂತಹ ವಿಧವೆಯರು ೬೦ ವರ್ಷ ವಯಸ್ಸು ಮುಟ್ಟುವವರೆಗೂ ದೊರೆಯುತ್ತದೆ. ನಂತರ ಅವರಿಗೆ ವೃದ್ಧಾಪ್ಯ ವೇತನ ಸೌಲಭ್ಯ ಸಿಗುತ್ತದೆ.

* ವಿಧವೆಯರಿಗೆ ವೃದ್ಧಾಪ್ಯ ವೇತನ ನೀಡಿಕೆ ವ್ಯವಸ್ಥೆಯು ಜನವರಿ ೧೯೮೪ ರಿಂದ ಪ್ರಾರಂಭವಾಗಲಿದೆ.

ಪ್ರಕಟಣೆ : " ಕರ್ನಾಟಕ ವಾರ್ತೆ "

## ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ

# ಪಾತ್ರ ಮತ್ತು ಸಾಧನೆಗಳು

ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯು ೧೯-೮-೭೫ ರಿಂದ ಕಾರ್ಯ ನಿರ್ವಹಿಸುತ್ತಿದೆ. ಈ ಮಂಡಲಿಯು ಬೆಂಗಳೂರು ನಗರದ ಹೊರತು ಕರ್ನಾಟಕದ ಎಲ್ಲಾ ನಗರ ಮತ್ತು ಪಟ್ಟಣಗಳಲ್ಲಿ ಕುಡಿಯುವ ನೀರು ಅಭಿವೃದ್ಧಿಗೊಳಿಸುವುದು ಮತ್ತು ಒಳಚರಂಡಿ ವ್ಯವಸ್ಥೆಯನ್ನು ಏರ್ಪಡಿಸುವ ಬಗ್ಗೆ ಕಾರ್ಯ ಕೈಗೊಳ್ಳುತ್ತಿದೆ. ಮಂಡಲಿಯ ಅಧಿಕಾರ ವ್ಯಾಪ್ತಿಯು ಕರ್ನಾಟಕ ೨೪೨ ಪಟ್ಟಣ-ನಗರಗಳನ್ನೊಳಗೊಂಡಿದೆ. ೧೯೮೧ರ ಜನಗಣತಿ ಪ್ರಕಾರ ಈ ಪಟ್ಟಣಗಳ ಜನಸಂಖ್ಯೆಯು ೬೮.೬೨ ಲಕ್ಷಗಳಾಗಿವೆ. ೧೯೮೩-೮೪ ರ ಸಾಲಿನಲ್ಲಿ ೭೪ ನಗರ/ಪಟ್ಟಣಗಳ ಕುಡಿಯುವ ನೀರಿನ ಅಭಿವೃದ್ಧಿ ಕಾರ್ಯಗಳು ಮತ್ತು ೧೮ ಪಟ್ಟಣಗಳ ಒಳಚರಂಡಿ ಯೋಜನೆಯ ಕಾರ್ಯಗಳು ಪ್ರಗತಿಯಲ್ಲಿವೆ. ಮಂಡಲಿಯ ಅನೇಕ ಕಾರ್ಯಗಳಿಗೆ ಜೀವವಿಮಾ ನಿಗಮವು ಆರ್ಥಿಕ ನೆರವನ್ನು ಒದಗಿಸುತ್ತದೆ. ಸ್ಥಳೀಯ ಸಂಸ್ಥೆಗಳು, ಗೃಹಮಂಡಳಿ ಮುಂತಾದ ಸಂಸ್ಥೆಗಳು ಆಗಾಗ ಕೋರುವ ನೀರು ಸರಬರಾಜು ಮತ್ತು ಒಳಚರಂಡಿ ಅಭಿವೃದ್ಧಿ ಕಾರ್ಯಗಳನ್ನು ಅವುಗಳಿಂದ ಠೇವಣಿ ಹಂತಿಗೆ ಪಡೆದು ಮಂಡಲಿಯು ಕಾರ್ಯಗತಗೊಳಿಸುತ್ತಿದೆ. ಸರ್ಕಾರವು ತಿದ್ದುಪಡಿ ಮಾಡಿರುವ ಮಂಡಲಿಯ ಕಾಯ್ದೆಯನ್ವಯ ಮಂಡಲಿಯ ಅಧಿಕಾರ ವ್ಯಾಪ್ತಿಯುಲ್ಲಿ ಬರುವ ಎಲ್ಲ ಪಟ್ಟಣ/ನಗರಗಳ ನೀರು ಸರಬರಾಜಿನ ವ್ಯವಸ್ಥೆಯ ನಿರ್ವಹಣೆಯನ್ನು ಕ್ರಮೇಣವಾಗಿ ಮಂಡಲಿಯೇ ವಹಿಸಿಕೊಳ್ಳಬೇಕಾಗಿದೆ. ಈಗಾಗಲೇ ಮಂಡಲಿಯು ೧೫ ನಗರ/ಪಟ್ಟಣಗಳ ನೀರು ಸರಬರಾಜು ನಿರ್ವಹಣೆ ಕೆಲಸವನ್ನು ನೋಡಿಕೊಳ್ಳುತ್ತಿದೆ.

### ಮಂಡಲಿಯು ಕಾರ್ಯಗತಗೊಳಿಸಿರುವ/ಕಾರ್ಯಗತಗೊಳಿಸಲಿರುವ ಕೆಲವು ಪ್ರಮುಖ ಯೋಜನೆಗಳು :

೧. ಮೈಸೂರು ನಗರದ ೩ನೇ ಹಂತದ ಸಮಗ್ರ ನೀರು ಸರಬರಾಜು ಯೋಜನೆ ಅಂದಾಜು ವೆಚ್ಚ ರೂ. ೫೭೨ ಲಕ್ಷಗಳು.
೨. ಹಾಸನ ಪಟ್ಟಣದ ನೀರು ಸರಬರಾಜು ಯೋಜನೆ ಅಂದಾಜು ವೆಚ್ಚ ರೂ. ೨೫೦ ಲಕ್ಷಗಳು.
೩. ಹುಬ್ಬಳ್ಳಿ-ಧಾರವಾಡ ಮಹಾನಗರ ಸಭೆಯ ಸಮಗ್ರ ನೀರು ಸರಬರಾಜು ಯೋಜನೆ ಅಂದಾಜು ವೆಚ್ಚ ರೂ. ೧೨೫೦ ಲಕ್ಷಗಳು.
೪. ಗುಲ್ಬರ್ಗಾ ನಗರದ ೩ನೇ ಹಂತದ ಸಮಗ್ರ ನೀರು ಸರಬರಾಜು ಯೋಜನೆಯ ಅಂದಾಜು ವೆಚ್ಚ ರೂ. ೪೫೬ ಲಕ್ಷಗಳು. ಈ ಯೋಜನೆಯು ಈಗ ಕಾರ್ಯಗತವಾಗುತ್ತಿದೆ
೫. ಬಳ್ಳಾರಿ ನಗರದ ಸಮಗ್ರ ನೀರು ಸರಬರಾಜು ಯೋಜನೆ ಅಂದಾಜು ವೆಚ್ಚ ರೂ. ೬೪೦ ಲಕ್ಷಗಳು. ಈ ಯೋಜನೆಯು ಈ ವರ್ಷ ಮಂಜೂರಾಗಿದ್ದು ಕಾರ್ಯಗತಗೊಳಿಸಲು ಕ್ರಮ ಕೈಗೊಳ್ಳಲಾಗಿದೆ.
೬. ಅಥಣಿ, ಬೀದರ, ಯಾದಗೀರ, ಶಹಾಬಾದ, ಕೋಲಾರ, ಶಿಡ್ಲಘಟ್ಟ, ಸಾಗರ, ಚಿಕ್ಕಬಳ್ಳಾಪುರ, ಮಂಗಳೂರು ಮತ್ತು ಸಿರಾ ಪಟ್ಟಣಗಳ ನೀರು ಸರಬರಾಜು ಅಭಿವೃದ್ಧಿ ಯೋಜನೆಗಳು ಇವುಗಳ ಒಟ್ಟು ಅಂದಾಜು ವೆಚ್ಚ ರೂ. ೭೨೦ ಲಕ್ಷಗಳು.
೭. ಹುಣಸೂರು, ಚನ್ನರಾಯಪಟ್ಟಣ, ಮಡಿಕೇರಿ, ಕಾರ್ಕಳ ಮತ್ತು ರಾಮನಗರ ಪಟ್ಟಣಗಳ ಒಳಚರಂಡಿ ಯೋಜನೆಗಳು ರೂ. ೩೭೮ ಲಕ್ಷಗಳಿಗೆ ಮಂಜೂರಾಗಿದ್ದು ಕಾರ್ಯಗತಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

ಮಂಡಲಿಯು ಪ್ರಾರಂಭವಾದಂದಿನಿಂದ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಗಳಿಗಾಗಿ ರೂ. ೫೦೭೪.೩೬ ಲಕ್ಷಗಳು ವೆಚ್ಚವಾಗಿದೆ ಮತ್ತು ೧೪೨ ನೀರು ಸರಬರಾಜು ಅಭಿವೃದ್ಧಿ ಯೋಜನೆಗಳು ಹಾಗೂ ೧೫ ಒಳಚರಂಡಿ ಯೋಜನೆಗಳ ಕೆಲಸಗಳು ಮುಗಿದಿವೆ.

೧೯೮೧-೯೦ ದಶಕವನ್ನು ಅಂತರರಾಷ್ಟ್ರೀಯ ನೀರು ಸರಬರಾಜು ಮತ್ತು ಒಳಚರಂಡಿ ನಿರ್ಮಾಣ ದಶಕವೆಂದು ಘೋಷಿಸಲಾಗಿದೆ. ಇದರ ಅನ್ವಯ ನಮ್ಮ ಕರ್ನಾಟಕ ನಗರ/ಪಟ್ಟಣಗಳ ಕುಡಿಯುವ ನೀರು ಸರಬರಾಜು ಮತ್ತು ನಿರ್ಮಲೀಕರಣ ಕಾರ್ಯಗಳ ಬಗ್ಗೆ ೨೪೨ ಕೋಟಿ ರೂಪಾಯಿಗಳ ಬೃಹತ್ ಯೋಜನೆಯನ್ನು ತಯಾರಿಸಿದೆ ಮತ್ತು ಇದರ ಬಗ್ಗೆ ಸರ್ಕಾರ ಹೊಡನೆ ವ್ಯವಹರಿಸುತ್ತಿದೆ.

ಮಂಡಲಿಯು ಪ್ರಾರಂಭಿಸಿದಂದಿನಿಂದ ಈ ೮ ವರ್ಷಗಳಲ್ಲಿ ಹೆಚ್ಚಿನ ತಾಂತ್ರಿಕ ಪರಿಣತಿ, ತರಬೇತಿ ಮತ್ತು ಸಾಮರ್ಥ್ಯವುಳ್ಳ ಅಭಿಯಂತರುಗಳನ್ನು ಹೊಂದಿದ್ದು ಕ್ಲಿಷ್ಟಕರವಾದ ಮತ್ತು ದೊಡ್ಡ ಯೋಜನೆಗಳನ್ನು ಕ್ಲುಪ್ತಕಾಲದಲ್ಲಿ ಕಾರ್ಯಗತಗೊಳಿಸುವ ಶಕ್ತಿಯನ್ನು ಹೊಂದಿದ ಸಂಸ್ಥೆಯಾಗಿ ಬೆಳೆದಿದೆ. ವರ್ಷಕ್ಕೆ ಸುಮಾರು ೨೦ ಕೋಟಿ ರೂಪಾಯಿಗಳ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಾಮರ್ಥ್ಯವನ್ನು ಈ ಮಂಡಲಿಯು ಪಡೆದಿದೆ.

ಮಂಡಲಿಯು ಕರ್ನಾಟಕ ಸರ್ಕಾರ, ಜೀವವಿಮಾ ನಿಗಮ ಮತ್ತು ಸಾರ್ವಜನಿಕರ ಸಹಕಾರದೊಂದಿಗೆ ಅಭಿವೃದ್ಧಿ ಹೊಂದುತ್ತಲಿದೆ.

ಕಾರ್ಯದರ್ಶಿ
ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ, ಬೆಂಗಳೂರು






# ಪ್ರಿಂಟರ್ಸ್ ಪ್ರಕಾಶನದ ಪ್ರಕಟಣೆಗಳು

| | | |
|---|---|---|
| ೧. | ಸಿಂಗಾರೆವ್ವ ಮತ್ತು ಅರಮನೆ: ಕಾದಂಬರಿ. ಲೇ: ಚಂದ್ರಶೇಖರ ಕಂಬಾರ. | ರೂ. ೯-೦೦ |
| ೨. | ಅವತಾರಗಳು: ಮೂಢನಂಬಿಕೆಗಳ ಬಗ್ಗೆ ವ್ಯಂಗ್ಯಲೇಖನಗಳು. ಲೇ: ಸಿದ್ಧಲಿಂಗಯ್ಯ | ೭-೦೦ |
| ೩. | ಷರ್ಲಾಕ್ ಹೋಮ್ಸ್‌ನ ರಕ್ತ ಪರಿಶೋಧನೆ: ಪತ್ತೇದಾರಿ ಕಾದಂಬರಿ | ೧೨-೦೦ |
| ೪. | ಷರ್ಲಾಕ್ ಹೋಮ್ಸ್‌ನ ನಾಲ್ವರ ಸಂಕೇತ: ಪತ್ತೇದಾರಿ ಕಾದಂಬರಿ | ೧೦-೦೦ |
| ೫. | ತದ್ರೂಪಿ: ನಾಟಕ. ಲೇಖಕ: ಪ್ರಸನ್ನ | ೭-೦೦ |
| ೬. | ಮನೆ-ಮನಸ್ಸು: ಕಾದಂಬರಿ. ಲೇ: ಸಿ. ಆರ್. ಚಂದ್ರಶೇಖರ್ | ೯-೦೦ |
| ೭. | ಕೋತಿಯ ಆಸೆ: ಸಚಿತ್ರ ಮಕ್ಕಳ ಕತೆಗಳು. ವಿವಿಧ ಲೇಖಕರು | ೨-೦೦ |
| ೮. | ಮಾತಿನ ಮಲ್ಲಿ: ಸಚಿತ್ರ ಮಕ್ಕಳ ಕತೆಗಳು. ವಿವಿಧ ಲೇಖಕರು | ೨-೦೦ |
| ೯. | ಆನೆ ಮತ್ತು ಇರುವೆ: ಸಚಿತ್ರ ಮಕ್ಕಳ ಕತೆಗಳು. ಲೇ: ಪ. ರಾಮಕೃಷ್ಣ ಶಾಸ್ತ್ರಿ | ೨-೦೦ |
| ೧೦. | ಅಡಿಗರ ಲೇಖನಗಳು ಮತ್ತು ಮುನ್ನುಡಿಗಳು: ಲೇ: ಗೋಪಾಲಕೃಷ್ಣ ಅಡಿಗ | ೧೫-೦೦ |
| ೧೧. | ದುಡಿಯುವವರ ದನಿ ಮತ್ತು ಇತರ ಲೇಖನಗಳು: ಲೇ: ಎಸ್. ವೆಂಕಟರಾಂ | ೧೬-೦೦ |
| ೧೨. | ಸಾವು ಮತ್ತು ಇತರ ಕತೆಗಳು: ಲೇ: ಬಿ. ಸಿ. ದೇಸಾಯಿ | ೯-೦೦ |
| ೧೩. | ಆಧುನಿಕ ಕನ್ನಡ ನಾಟಕ: ವಿಮರ್ಶಾ ಗ್ರಂಥ. ಲೇ: ಕೆ. ಮರುಳಸಿದ್ಧಪ್ಪ | ೪೦-೦೦ |
| ೧೪. | ಈ ಶತಮಾನದ ನೂರು ಇಂಗ್ಲಿಷ್ ಕವನಗಳು: ಲೇ: ರಾಮಚಂದ್ರ ಶರ್ಮ | ಸಾ. ೧೬-೦೦ |
| | | ಕ್ಯಾಲಿಕೋ ೨೭-೦೦ |
| ೧೫. | ಸಂಕಲನ: ಪ್ರಿಂಟರ್ಸ್ ಪ್ರಕಾಶನದ ವಾರ್ಷಿಕ-೧೯೮೩. ವಿವಿಧ ಲೇಖಕರು | ೨೦-೦೦ |
| ೧೬. | ವೃತ್ತ: ಕಾದಂಬರಿ. ಲೇ: ಕೃಷ್ಣ ಮಾಸಡಿ | ೧೮-೦೦ |
| ೧೭. | ಹೇ ಕಾಪುರುಷ: ಕಾದಂಬರಿ. ಲೇ: ಕೆ. ಟಿ. ಗಟ್ಟಿ | ೨೮-೦೦ |
| ೧೮. | ಬೀಜ: ಕಾದಂಬರಿ. ಲೇ: ಶಾಂತಿನಾಥ ದೇಸಾಯಿ | ೨೬-೦೦ |
| ೧೯. | ಹಂತ: ಕಾದಂಬರಿ. ಲೇ: ಕುಂದರನಾಡ ಪಾಟೀಲ | ೧೨-೦೦ |
| ೨೦. | ಮಂಗೂ ಮಹಾರಾಜ: ಸಚಿತ್ರ ಮಕ್ಕಳ ಕತೆಗಳು. ವಿವಿಧ ಲೇಖಕರು | ೨-೦೦ |
| ೨೧. | ಮಾಯಾವಿ ರಾಕ್ಷಸ: ಸಚಿತ್ರ ಮಕ್ಕಳ ಕತೆಗಳು. ಲೇ: ಡಿ. ಕುಸುಮ ಕುಮಾರಿ | ೨-೦೦ |
| ೨೨. | ಪುಟ್ಟ-ಪುಟ್ಟ: ಸಚಿತ್ರ ಮಕ್ಕಳ ಕತೆಗಳು. ವಿವಿಧ ಲೇಖಕರು | ೨-೦೦ |
| ೨೩. | ಬೊಕ್ಕ ತಲೆಯ ರಾಜ: ಸಚಿತ್ರ ಮಕ್ಕಳ ಕತೆಗಳು. ಲೇ: ಕೃ. ನಾರಾಯಣರಾವ್ | ೨-೦೦ |
| ೨೪. | ೩ ರಿಂದ ೭ನೇ ತರಗತಿಯ ವರೆಗಿನ ಗಣಿತ ಅಭ್ಯಾಸ ಪುಸ್ತಕಗಳು | |

ಪ್ರತಿಗಳಿಗೆ ವಿಚಾರಿಸಿ

## ಪ್ರಿಂಟರ್ಸ್ ಪ್ರಕಾಶನ

**೭೫, ಮಹಾತ್ಮಾ ಗಾಂಧಿ ರಸ್ತೆ, ಬೆಂಗಳೂರು – ೫೬೦ ೦೦೧**

# ಪರಿಷತ್ತಿನ ಹಸ್ತಪ್ರತಿ ವಿಭಾಗಕ್ಕೆ ಮತ್ತಷ್ಟು ವೈಶಿಷ್ಟ್ಯಪೂರ್ಣ ಹಸ್ತಪ್ರತಿಗಳು

ಇತ್ತೀಚೆಗೆ ಕನ್ನಡ ಸಾಹಿತ್ಯ ಪರಿಷತ್ತು "ಪ್ರಾಚೀನ ಹಸ್ತಪ್ರತಿಗಳ ಸಂಗ್ರಹ ಮತ್ತು ಸಂರಕ್ಷಣಾ ಯೋಜನೆ"ಯ ಆಶ್ರಯದಲ್ಲಿ ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಹೊದಿಗೆರೆ (ಛತ್ರಪತಿ ಶಿವಾಜಿ ಮಹಾರಾಜನ ತಂದೆ ಷಾಹಾಜಿಯ ಸಮಾಧಿ ಇರುವ ಸ್ಥಳ) ಗ್ರಾಮದಲ್ಲಿ ಐವತ್ತಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಕೊಂಡುಕೊಂಡಿತು. ಈ ಹಸ್ತಪ್ರತಿಗಳು ಸುಸ್ಥಿತಿಯಲ್ಲಿದ್ದು ಅವುಗಳ ಹೆಸರುಗಳು ಈ ರೀತಿ ಇವೆ:

ಬಸವ ಚಾರಿತ್ರ, ಸೋಮೇಶ್ವರ ಶತಕ, ಶಿವಪೂಜಾವಿಧಿ, ರಾಘವೇಶ್ವರನ ಕಾವ್ಯ, ಚನ್ನಬಸವೇಶ್ವರ ಪುರಾಣ, ಶಿವಾನಂದ ಲಹರಿ, ಧನಂಜಯ ನಿಘಂಟು, ಗಣಸಹಸ್ರನಾಮ, ರಾಘವಾಂಕಯ್ಯನ ಕಾವ್ಯ, ಪಂಚತಂತ್ರ, ಬ್ರಹ್ಮೋತ್ತರ ಪುರಾಣ, ಕಾಲಾಮೃತ, ವಿದ್ಯಾರಣ್ಯ ಸೂತ್ರ, ಅಮರಕೋಶ (ಅರ್ಥ ಸಹಿತ), ಅಮರಕೋಶ ಗ್ರಂಥ, ಅಮರಕೋಶ ಗ್ರಂಥ ಮಹಿಮ ಸ್ತೋತ್ರ ಟೀಕು, ಬಿಲ್ಹಣ ನಾಟಕ ಕಾವ್ಯ ಸಂಗ್ರಹ ವೀರಶೈವಾಮೃತ ಪುರಾಣದಲ್ಲಿರತಕ್ಕ ಈಶ್ವರನ ಪಂಚವಿಂಶತಿ ಲೀಲಾ ವಿವರ, ಆರಣ್ಯಪರ್ವದ ಕೆಲವು ಸಂಧಿಗಳು, ಪರ್ವತಕಲ್ಪಗ್ರಂಥ, ಚನ್ನಬಸವ ಪುರಾಣದೊಳಗಣ ಗೌತಮ ಋಷಿಗಳವಾದ ಪ್ರಭುದೇವರ ಅನುಭವ ಮುದ್ರೆ, ಸುಜನ ಪದ್ಧತಿ, ಪ್ರಭುಲಿಂಗಲೀಲೆ, ಯಕ್ಷಗಾನ, ವೈದ್ಯಪುಸ್ತಕ, ಹಾಡುಗಳು, ಶಿವತತ್ವಾಮೃತ ಆದಿತ್ಯಪುರಾಣ, ಕೈವಲ್ಯ ಪದ್ಧತಿ ಶಾಸ್ತ್ರ ವ್ಯಾಖ್ಯಾನ, ರಾಜಶೇಖರ ವಿಲಾಸ, ಕರಣಹಸಿಗೆ, ಮಲಯರಾಜ ಸ್ತೋತ್ರ, ಚನ್ನಬಸವೇಶ್ವರ ವಚನ, ಧನಂಜಯ ನಿಘಂಟು, ಬಸವ ವಿಲಾಸ, ಬಸವರಾಜ ವಿಜಯ ಪುರಾಣ, ಶಬರಶಂಕರ ವಿಲಾಸ, ಶಿವಾನುಭವಶಾಸ್ತ್ರ, ಗುರುಸ್ಥಲ, ಕಪೋತ ಚಾರಿತ್ರ, ನಾನಾ ಅರ್ಥರತ್ನಾಕರ, ಶತರುದ್ರಿಯ, ಜಾತಚಂದ್ರಿಕಾ, ಧನಂಜಯ ನಿಘಂಟು, ರೇವಣ ಸಾಂಗತ್ಯ, ರೇವಣಸಿದ್ಧ ಪುರಾಣ, ಷಟ್ಸ್ಥಲ ತತ್ವವಿಚಾರ, ಅನುಭವ ಶಿಖಾಮಣಿಗ್ರಂಥ, ಬಸವ ಪುರಾಣ, ದೀಪದ ಕಲಿಯರ ಕಥೆ, ವೀರಶೈವಾಮೃತ.

ಈ ಸಂಗ್ರಹದಲ್ಲಿ ಬಹುಪಾಲು ವೀರಶೈವ ಧರ್ಮಕ್ಕೆ ಸಂಬಂಧಿಸಿದ ಕೃತಿಗಳಿವೆ. ಹಸ್ತಪ್ರತಿಗಳು ಹೊದಿಗೆರೆಯ ಸೋಮಶೇಖರಯ್ಯ ಎನ್ನುವ ಶಾನುಭೋಗರೊಬ್ಬರ ಮನೆಯಲ್ಲಿದ್ದು, ಈ ಸೋಮಶೇಖರಯ್ಯನವರು ವೃತ್ತಿಯಲ್ಲಿ ಶಾನುಭೋಗರಾಗಿದ್ದು ಪ್ರವೃತ್ತಿಯಲ್ಲಿ ಸಾಹಿತ್ಯಾಸಕ್ತರಾಗಿದ್ದರೆನ್ನುವುದಕ್ಕೆ ಸಾಕ್ಷಿಯಾಗಿವೆ. ಮುದ್ರಣ ಸೌಕರ್ಯ ಇಲ್ಲದಂತಹ ಕಾಲದಲ್ಲಿಯೂ ಕೈಬರವಣಿಗೆಯಲ್ಲೇ ಐವತ್ತಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಬರೆದಿಟ್ಟುಕೊಂಡು ಕಾಪಾಡಿಕೊಂಡು ಬಂದಿರುವುದು ಸ್ತುತ್ಯಾರ್ಹವಾದ ವಿಷಯವಾಗಿದೆ. ಇವುಗಳಲ್ಲಿ ಕೆಲವು ಅಪ್ರಕಟಿತವಾಗಿದ್ದು, ಇದುವರೆಗಿನ ಪರಿಷತ್ತಿನ ಹಸ್ತಪ್ರತಿ ಸಂಗ್ರಹದಲ್ಲಿಲ್ಲದಂತಹ ಹಸ್ತಪ್ರತಿಗಳು ಕೆಲವು ಇವೆ. ಹಸ್ತಪ್ರತಿಗಳನ್ನು ವಿವರವಾಗಿ ಪರಿಶೀಲಿಸಿದಾಗ ಇನ್ನೂ ಹೆಚ್ಚಿನ ಮಾಹಿತಿಗಳು ದೊರೆಯಬಹುದು.

ಹಸ್ತಪ್ರತಿಗಳನ್ನು ದೀರ್ಘಕಾಲದಿಂದ ನಶಿಸದಂತೆ ಕಾಪಾಡಿಕೊಂಡು ಬಂದು, ಅವುಗಳನ್ನು ಬರೆಯುವ ಎರಡು ಕಂಠ (ಲೇಖಣಿ)ಗಳ ಸಹಿತ ಹೆಚ್.ಎಮ್. ಪುಟ್ಟಸ್ವಾಮಿಯವರು ಪರಿಷತ್ತಿಗೆ ನೀಡಿದ್ದಕ್ಕಾಗಿ ಪರಿಷತ್ತು ಅವರಿಗೆ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತದೆ.

ಹಂಪ. ನಾಗರಾಜಯ್ಯ
ಅಧ್ಯಕ್ಷರು

Reg. No. L/NP/KRNU 117/WPP-7—1st January 1984

Licensed to Post without pre-payment, Licence No. 2

## ಪರಿಷತ್ತು ಪ್ರಕಟಿಸಿರುವ ವೈವಿಧ್ಯಮಯ ಪುಸ್ತಕಗಳು

"ಬೆಳ್ಳಿ ಬಿಟ್ಟ ಬಳ್ಳಿ" ಮಾಲೆಯ ಪುಸ್ತಕಗಳು / ಕಾವ್ಯ / ಸಾಹಿತ್ಯ / ವಿಮರ್ಶೆ / ಹಳಗನ್ನಡ ಗದ್ಯಾನುವಾದ / ಪ್ರಬಂಧ / ಕರ್ಣಾಟಕ ಕವಿಚರಿತೆ / ಸಂಗೀತ / ಗಮಕ / ಶಿಶು ಸಾಹಿತ್ಯ / ಜನಪದ ಸಾಹಿತ್ಯ / ವಿಜ್ಞಾನ / ಆರೋಗ್ಯ / ಇತಿಹಾಸ / ಮಹಿಳಾ ಮಾಲಿಕೆ / ಜೀವನ ಚರಿತ್ರೆ / ಕಥೆ / ನಾಟಕ / ಹಾಸ್ಯ ಸಾಹಿತ್ಯ / ಸ್ವಯಂ ಬೋಧಿನಿಗಳು / ಸ್ಮರಣ ಸಂಚಿಕೆಗಳು / ಸಾಹಿತ್ಯ ಸಮ್ಮೇಳನ ಸಂಪುಟಗಳು / ವಿಚಾರ ಸಂಕಿರಣ ಸಂಪುಟಗಳು / ಅಧ್ಯಕ್ಷರ ಭಾಷಣ ಸಂಪುಟಗಳು/ ಮಕ್ಕಳ ಪುಸ್ತಕಗಳು / ಕಿರಿಯರ ಪುಸ್ತಕ ಮಾಲೆ — ಮತ್ತಿತರ ಪ್ರಕಟಣೆಗಳು



## ೧೯೮೩ರ ಪ್ರಕಟಣೆಗಳು

ಕೊಡವ ಕನ್ನಡ ನಿಘಂಟು / ಮಡಿಕೇರಿ ಸಾಹಿತ್ಯ ಸಮ್ಮೇಳನ / ಚಿನ್ನದ ಕದರ್ಪಾಂಗೆ ಸಲಹಿನಿ / ಲಕ್ಷ್ಮೀಶ ಕವಿ / ನಮ್ಮ ಕರ್ನಾಟಕ / ವಚನ ವಾಙ್ಮಯ ದರ್ಶನ / ಕೂಸಾಯ್ತು ನಮ್ಮ ಕೊಮರಾಗೆ / ಓಂಕಾರ ನಾದಸುಧಾ / ವೀರಶೈವ ಪುರಾಣಗಳು / ಸರ್ವಜ್ಞ ಸಮಾಜ ದರ್ಶನ ಮತ್ತು ಸಾಹಿತ್ಯ ಸತ್ವ / ರುದ್ರಭಟ್ಟ ಕವಿ / ಶಾಂತಿಪುರಾಣಂ / ಶಾಂತೀಶ್ವರ ಪುರಾಣಂ / ಮಾನವಕುಲ / ನಾಗಚಂದ್ರ ಒಂದು ಅಧ್ಯಯನ / ಭಕ್ತ ಮಾರ್ಕಂಡೇಯ / ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ / ಕೊಡಗು ಇತಿಹಾಸ ಪುಟಗಳಿಂದ / ಚಾವುಂಡರಾಯ ಪುರಾಣಂ / ಕರ್ನಾಟಕದ ಕಲೆಗಳು–ಭಾಗ ೨ (ಸಂಗೀತ) / ಚಾಮರಸ ವಿಚಾರ ಸಂಕಿರಣ / ಗುಮ್ಮನಳ್ಳಿ ಕದನ / ನಾನೊಂದು ಕನಸು ಕಂಡೆ / ಉತ್ತಂಗಿ ಚನ್ನಪ್ಪ.

* ಪುಸ್ತಕಗಳನ್ನು ಕೊಂಡು ಓದಿ ; ಜ್ಞಾನಸಂಪತ್ತು ಹೆಚ್ಚಿಸಿಕೊಳ್ಳಿ *

ಬಿ.ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–೫೬೦ ೦೧೮